ಎಸ್. ಕೆ. ರಾಮಚಂದ್ರರಾವ್

# ವಿವಾಹ ಪದ್ಧತಿಗಳು

16




ಬೆಂಗಳೂರು ವಿಶ್ವವಿದ್ಯಾಲಯ
ಬೆಂಗಳೂರು

# ವಿವಾಹ ಪದ್ಧತಿಗಳು

ಎಸ್. ಕೆ. ರಾಮಚಂದ್ರರಾವ್

ಪ್ರಕಟಣ ಮತ್ತು ಪ್ರಚಾರೋಪನ್ಯಾಸ ವಿಭಾಗ
ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು

Vivaha Paddhathigalu: by Prof. S. K. Ramachandra Rao
Published by the Bangalore University, Bangalore
Pp. 104 + viii 1972



ಪ್ರಕಾಶಕರು:
ಕೆ. ಸಿ. ಶಿವಪ್ಪ
ಕೋ-ಆರ್ಡಿನೇಟರ್
ಪ್ರಕಟಣ ಮತ್ತು ಪ್ರಚಾರೋಪನ್ಯಾಸ ವಿಭಾಗ
ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು 1

**ಬೆಲೆ: 50 ಪೈಸೆ**

ಮುದ್ರಕರು:
ಈಸ್ಟರ್ನ್ ಪ್ರೆಸ್
ಬನ್ನೇರುಘಟ್ಟ ರಸ್ತೆ
ಬೆಂಗಳೂರು 560029

## ಮುನ್ನುಡಿ

ವಿಶ್ವವಿದ್ಯಾಲಯಗಳು ಕೇವಲ ತಿಳುವಳಿಕೆಯ ಕೇಂದ್ರಗಳಾದರೆ ಸಾಲದು. ಅವು ಸುತ್ತಮುತ್ತಲಿನ ಜನತೆಯ ಶೈಕ್ಷಣಿಕ–ಸಾಂಸ್ಕೃತಿಕ ಆಗುಹೋಗುಗಳಲ್ಲಿ ಸಹ ಸಕ್ರಿಯವಾಗಿ ಪಾಲ್ಗೊಳ್ಳುವುದು ಅವಶ್ಯಕ. ಪಾಠಪ್ರವಚನ, ಉನ್ನತ ವ್ಯಾಸಂಗ ಮತ್ತು ಸಂಶೋಧನೆಗಳಿಗೆ ಮಾತ್ರ ವಿಶ್ವವಿದ್ಯಾಲಯಗಳ ಕಾರ್ಯವ್ಯಾಪ್ತಿ ಸೀಮಿತವಾಗಿರಬಾರದು. ಸಾಮಾನ್ಯ ಜನತೆಯಲ್ಲಿ ಅರಿವಿನ ಸಿರಿಯನ್ನು ಹಂಚುವ ಹೊಣೆಹೊತ್ತು ವಿಶ್ವವಿದ್ಯಾಲಯಗಳು ಜ್ಞಾನಪ್ರಸಾರ ಕೇಂದ್ರಗಳಾಗಿ ಮುನ್ನಡೆಯಬೇಕು.

ಬೆಂಗಳೂರು ವಿಶ್ವವಿದ್ಯಾಲಯವು ಕಳೆದ ನಾಲ್ಕೈದು ವರ್ಷಗಳಿಂದ ನಗರದ ನಾನಾ ಸಂಘಸಂಸ್ಥೆಗಳಲ್ಲಿ, ಕಾರ್ಖಾನೆಕಾರ್ಮಿಕ ಕೂಟಗಳಲ್ಲಿ ಹಾಗೂ ಗ್ರಾಮಾಂತರ ಪ್ರದೇಶಗಳಲ್ಲಿ ಪ್ರಚಾರೋಪನ್ಯಾಸಗಳನ್ನು ಏರ್ಪಡಿಸುತ್ತ ಬಂದಿದೆ. ಆಯಾ ವಿಷಯಗಳಲ್ಲಿ ಪರಿಣಿತರಾದವರು ಭಾಷಣಗಳನ್ನು ನೀಡಿ, ಅನಂತರ ಅವುಗಳನ್ನು ಪುಸ್ತಕ ರೂಪದಲ್ಲಿ ಪ್ರಕಟಿಸಲು ನಮ್ಮೊಡನೆ ಸಹಕರಿಸುತ್ತಿರುವುದು ಸಂತಸದ ಸಂಗತಿ. ಅತ್ಯಧಿಕ ಸಂಖ್ಯೆಯಲ್ಲಿ ನಮ್ಮ ಜನತೆಯ ಕೈ ಸೇರಲೆಂದು ಈ ಕಿರು-ಹೊತ್ತಿಗೆಗಳನ್ನು ಸುಲಭ ಬೆಲೆಯಲ್ಲಿ ಪ್ರಕಟಿಸುತ್ತಿದ್ದೇವೆ. ಕನ್ನಡ ಸಾಹಿತ್ಯದ ವಿವಿಧ ಪ್ರಕಾರಗಳ ಶ್ರೀಮಂತಿಕೆಯನ್ನು ಹೆಚ್ಚಿಸಿ, ಜನಸಾಮಾನ್ಯರ ತಿಳಿವನ್ನು ಉತ್ತಮಗೊಳಿಸುವ ದಿಸೆಯಲ್ಲಿ ಈ ಹೊತ್ತಿಗೆಗಳು ಸಹಕಾರಿಯಾಗಲೆಂದು ನಾನು ಮನಸಾರೆ ಹಾರೈಸುತ್ತೇನೆ.

**ಟಿ. ಕೆ. ತುಕೋಳ್**

ಸೆಪ್ಟಂಬರ್ 4, 1972 ಉಪಕುಲಪತಿ

## ಮೊದಲ ಮಾತು

ಮನೋವಿಜ್ಞಾನಿಯಾದವನು ಸಾಮಾಜಿಕ ಪ್ರವೃತ್ತಿಗಳನೂ ಪ್ರಕಾರಗಳನ್ನೂ ಗಮನಿಸದೆ ಸಾಧ್ಯವಿಲ್ಲ. ಮನುಷ್ಯನ ಮೂಲ ಪ್ರಕೃತಿಯೆನ್ನುವುದು ಏನೋ, ಪ್ರವೃತ್ತವಾದ ಪ್ರಕೃತಿಯುಂತೂ ಸಾಮಾಜಿಕ ನೆಲೆಯಲ್ಲಿಯೇ ನಿಂತಿದೆ. ಸಮಾಜದ ಕಟ್ಟುಪಾಡು ಗಳಲ್ಲಿ ಮುಖ್ಯವಾದ, ಮೂಲಭೂತವಾದ, ಸಾರ್ವತ್ರಿಕವಾದ ವಿವರವೆಂದರೆ ಕುಟುಂಬ; ಕುಟುಂಬಕ್ಕೆ ಕಾರಣವಾಗುವುದು ಮದುವೆ. ಮದುವೆಯಿಂದ ಮನೆ; ಸಂಭೋಗದಿಂದ ಸಂಸಾರ. ಮನೆಗಳಿಗಿಂತ ಊರು ಮುಖ್ಯ, ಸಂಸಾರಕ್ಕಿಂತ ಸಮಾಜ ಮುಖ್ಯ ಎನ್ನುವ ನೆಲೆಯಲ್ಲಿ ಮದುವೆಯನ್ನು ವ್ಯಕ್ತಿಯ ಅಭಿರುಚಿ-ಅನು ಕೂಲಕ್ಕಾಗಲೀ ಸಂದರ್ಭದ ಅಗತ್ಯ-ಆಕಸ್ಮಿಕಗಳಿಗಾಗಲೀ ಬಿಡದೆ ಸಮಾಜವು ಅದಕ್ಕೊಂದು ಕಟ್ಟುಪಾಡನ್ನು ಅಳವಡಿಸುತ್ತದೆ. ಕಟ್ಟುಪಾಡಿನ ಮೂಲ ಉದ್ದೇಶ ಸಂಸಾರವು ಸಮಾಜದ ಹಿತಕ್ಕೆ ಕಟ್ಟುಬೀಳಲಿ, ಸಮಾಜವು ಕೊಡುವ ಸ್ವಾತಂತ್ರ್ಯದಲ್ಲಿ ಸಂಸಾರವು ಸುಖಪಡಲಿ ಎಂಬುದಷ್ಟೇ ಆದರೂ, ಇದನ್ನು ವ್ಯಕ್ತಿಗಳಿಗೆ ಮನವರಿಕೆಮಾಡಿಕೊಡಲೆಂದು, ಅವರ ಸ್ವಚ್ಛಂದ ಪ್ರವೃತ್ತಿಯನ್ನು ಬಿಗಿಹಿಡಿಯಲೆಂದು ಪದ್ಧತಿಗಳೂ ಸಂಪ್ರದಾಯಗಳೂ ಮೈದುಂಬಿ ಬರುತ್ತವೆ.

ಒಂದೊಂದು ಜನಾಂಗದ ಉದ್ದೇಶ, ಅಗತ್ಯ, ಹಿತಗಳನ್ನನುಸರಿಸಿ ಪದ್ಧತಿಗಳು ರೂಪುಗೊಳ್ಳುತ್ತವೆ. ಹೀಗಾಗಿ ಪದ್ಧತಿಗಳಲ್ಲಿ ವೈವಿಧ್ಯವಿರುವುದು ಸಹಜವೇ. ಸಮಾಜ-ಸಂಪರ್ಕದಿಂದಾಗಿ, ಸಮಾಜವಿಕಾಸದಿಂದಾಗಿ ಪದ್ಧತಿಗಳಲ್ಲಿ ಮಾರ್ಪಾಟೂ ಒದಗು ತ್ತದೆ. ಯಾವೊಂದು ಜನಾಂಗವೂ ಮೇಲು, ಕೀಳು ಎನ್ನಲಾಗ ದಂತೆಯೇ, ಯಾವ ಪದ್ಧತಿಯನ್ನೂ ಸರಿ, ತಪ್ಪು ಎನ್ನಲಾಗದು. ಒಂದು ಜನಾಂಗದ ಪದ್ಧತಿ ಬೇರೊಂದು ಜನಾಂಗಕ್ಕೆ ಸೋಜಿಗ

ವೆಂದು ಕಂಡರೂ, ಅದರ ಯುಕ್ತಾಯುಕ್ತತೆಯನ್ನು ಅಳೆಯ ಬೇಕಾದುದು ಪದ್ಧತಿಯನ್ನು ಉಳಿಸಿಕೊಂಡಿರುವ ಸಮಾಜದ ನೆಲೆಯಲ್ಲಿಯೇ. ತನ್ನ ಜನಾಂಗವೇ ಶ್ರೇಷ್ಠ, ತನ್ನ ಪದ್ಧತಿಗಳೇ ಸರಿ ಎನುವುದು 'ಎತ್ನೊ ಸೆಂಟ್ರಿಕ್' ದೃಷ್ಟಿ; ಇದರಿಂದ ಈಗಾಗಲೇ ಬೇಕಾದಷ್ಟು ತೊಂದರೆಯಾಗಿದೆ; ಶಾಸ್ತ್ರೀಯವಾಗಿಯೂ ಇದು ತಪ್ಪುಗ್ರಹಿಕೆ. ಯಾವ ಜನಾಂಗವನ್ನಾಗಲೀ ಪದ್ಧತಿಯನ್ನಾಗಲೀ ಪರಿಶೀಲಿಸಬೇಕಾದುದು ಅದರ ಬಯಕೆಪೂರೈಕೆಗಳ ಆಧಾರದ ಮೇಲೆ. ಇಲ್ಲಿ ಮೇಲು-ಕೀಳು, ಒಳ್ಳೆಯದು–ಕೆಟ್ಟದು, ಸಭ್ಯ-ಅಸಭ್ಯ ಎಂಬ ವಿಚಾರ ಸಲ್ಲದು. ಆಯಾ ಕಾಲಕ್ಕೆ, ಆಯಾ ಸಂದರ್ಭಕ್ಕೆ, ಆಯಾ ಪ್ರದೇಶಪರಿಸರಗಳಿಗೆ, ಆಯಾ ಒತ್ತಡಗಳಿಗೆ ಅನುಕೂಲವಾಗಿ ಪದ್ಧತಿಗಳೂ ಮೂಡಿಬರುತ್ತವೆ; ಕಾಲ, ಸಂದರ್ಭ, ಪರಿಸರ, ಒತ್ತಡಗಳು ಬದಲಿಸಿದಂತೆ ಪದ್ಧತಿಗಳೂ ಬದಲಾಗುತ್ತವೆ. ಇದರಲ್ಲಿ ಪೂರ್ವಗ್ರಹಪೀಡೆ ಅನಗತ್ಯ.

ಸಾಮಾಜಿಕ ಮತ್ತು ಮನೋವೈಜ್ಞಾನಿಕ ವಿದ್ಯಾರ್ಥಿಗಳಿಗೆ ಅನುಕೂಲವಾಗಲೆಂದು ಈ ಸಣ್ಣ ಪುಸ್ತಕವನ್ನು ಸಿದ್ಧಪಡಿಸಿದ್ದೇನೆ. ಬೆಂಗಳೂರು ವಿಶ್ವವಿದ್ಯಾನಿಲಯದ ಪ್ರಕಟಣ ಮತ್ತು ಪ್ರಚಾರೋಪನ್ಯಾಸ ವಿಭಾಗದಿಂದ ಇದನ್ನು ಪ್ರಕಟಿಸಲು ಒಪ್ಪಿ, ಮುಂದೆ ಬಂದು ನೆರವಾದ ನನ್ನ ಮಾನ್ಯಮಿತ್ರ ಶ್ರೀ ಕೆ. ಸಿ. ಶಿವಪ್ಪನವರಿಗೆ ನಾನು ಋಣಿಯಾಗಿದ್ದೇನೆ. ಈ ಪುಸ್ತಕದಲ್ಲಿ ಸೇರಿರುವುದು ವಿವರಗಳ ಸಂಗ್ರಹವಷ್ಟೆ; ಅವುಗಳ ವಿವೇಚನೆ, ವಿಮರ್ಶೆ ಮತ್ತೊಂದು ಪುಸ್ತಕದಲ್ಲಿ ಬರಬೇಕು. ಅದಕ್ಕೆ ಪ್ರಚೋದನೆ ಈ ಪುಸ್ತಕದಿಂದ ಒದಗುವುದಾದರೆ ನನ್ನ ಕೆಲಸ ಸಾರ್ಥಕವಾಯಿತು.

ಕ್ಯಾಲಿಸನ್ ಕಾಲೇಜ್ ಸ್ಟಡಿ ಸೆಂಟರ್
ಬೆಂಗಳೂರು

ಎಸ್. ಕೆ. ರಾಮಚಂದ್ರರಾವ್

## ಪರಿವಿಡಿ

# 1. ಸಾಮಾಜಿಕ-ಮನೋವೈಜ್ಞಾನಿಕ ದೃಷ್ಟಿ

ಮಾನವ ಕುಟುಂಬ ಕೇವಲ ಆರ್ಥಿಕ ವ್ಯವಸ್ಥೆಯಲ್ಲ. ಹೊಟ್ಟೆ ಪಾಡಿಗೆಂದೇ ಮದುವೆ ಮಾಡಿಕೊಳ್ಳುವುದು ನಿಯಮವಲ್ಲ; ಅದಕ್ಕೆ ಅಪವಾದ. ಮನುಷ್ಯ ಜೀವನದ ಎಲ್ಲ ಪ್ರಯೋಜನಗಳಿಗೂ ಹಿನ್ನೆಲೆಯಾದ, ಸಿದ್ಧತೆಯಾದ ಮದುವೆಯಲ್ಲಿ ಆರ್ಥಿಕ, ಸಾಮಾಜಿಕ, ಧಾರ್ಮಿಕ, ಮನೋವೈಜ್ಞಾನಿಕ ವಿವರಗಳೆಲ್ಲವೂ ಇವೆ. ಈ ವಿಭಾಗಗಳಲ್ಲಿ ತಜ್ಞರಾದವರು ಮದುವೆಯ ಪ್ರಕಾರಗಳನ್ನು ಕೂಲಂಕಷವಾಗಿ ಅಧ್ಯಯನ ಮಾಡಿದ್ದಾರೆ, ಹಲವಾರು ಜನಾಂಗ ಗಳಲ್ಲಿ ಸ್ವಾರಸ್ಯವಾದ ಪದ್ಧತಿಗಳನ್ನು ಅಭ್ಯಾಸಮಾಡಿ ಅವುಗಳ ಒಳ ಅರ್ಥಗಳನ್ನು ಕಂಡುಹಿಡಿಯಲು ಪ್ರಯತ್ನಪಟ್ಟಿದ್ದಾರೆ.

ಎಡ್ವರ್ಡ್ ವೆಸ್ಟರ್ ಮಾರ್ಕ್ (1862 – 1939) ಎಂಬಾ ತನು 'ಮನುಷ್ಯರ ಮದುವೆಯ ಉಗಮ' ಎಂಬ ಪುಸ್ತಕವನ್ನು ಪ್ರಕಟಿಸಿದುದು ಈ ಅಧ್ಯಯನಗಳ ಅಂಕುರಾರ್ಪಣವಾಯಿತೆನ್ನ ಬಹುದು. ಜೀವವಿಜ್ಞಾನದ ದೃಷ್ಟಿಯಿಂದ ಈತನು ಮದುವೆಯ ವಿವರಗಳನ್ನು ವಿಶ್ಲೇಷಣೆಮಾಡಿ, ಕೆಳಮಟ್ಟದ ಪ್ರಾಣಿಗಳಲ್ಲಿ ಬಳಕೆಯಲ್ಲಿರುವ ಲೈಂಗಿಕ ಸಂಬಂಧಗಳನ್ನು ಪರಿಶೀಲಿಸಿದನು. ಸಮಾಜದ ಬೆಳವಣಿಗೆಯಲ್ಲಿ ಕಾಮುಕ ಪ್ರವೃತ್ತಿಯ ಪಾತ್ರ, ಸ್ತ್ರೀಪುರುಷರ ಸಂಬಂಧದಲ್ಲಿ ಪೌರುಷದ ಪ್ರಾಧಾನ್ಯ, ಪರಿಸರದ ಒತ್ತಡ, ಸಹಜವಾದ ಆಯ್ಕೆ, ನೀತಿಯ ಕಲ್ಪನೆ ಇವುಗಳನ್ನು ವೆಸ್ಟರ್ ಮಾರ್ಕ್ ಸ್ಪಷ್ಟಪಡಿಸಿದನು. ಆದರೆ ಈತನಿಗೆ ಆದಿವಾಸಿ ಬುಡಕಟ್ಟುಗಳ ಪರಿಚಯ ಅಷ್ಟಾಗಿ ಇಲ್ಲದಿದ್ದುದು ಒಂದು ಕೊರತೆ ಯೆನಿಸಿತು. ಎ. ಇ. ಕ್ರಾಲಿ ಎಂಬಾತನು 1902 ರಲ್ಲಿ 'ನಿಗೂಢ

ಗುಲಾಬಿ (The Mystic Rose) ಎಂಬ ಪುಸ್ತಕವನ್ನು ಪ್ರಕಟಿಸಿ. ಅದರಲ್ಲಿ ಹಲವಾರು ಆದಿವಾಸಿ ಜನಾಂಗಗಳ ವೈವಾಹಿಕ ಪದ್ಧತಿಗಳನ್ನು ವಿವರಿಸಿ, ವಿವಾಹದಲ್ಲಿ ಧಾರ್ಮಿಕ ನೆಲೆಯಿರುವುದನ್ನು ಸ್ಪಷ್ಟಪಡಿಸಿದನು. ಕ್ರಾಲಿಯದು ಮನೋವೈಜ್ಞಾನಿಕ ದೃಷ್ಟಿ: ಮದುವೆಯೆನ್ನುವುದು ಒಂದು ಧಾರ್ಮಿಕ ವಿಧಿಯಷ್ಟೆ: ಅದರ ಸಾಮಾಜಿಕ ಪ್ರಯೋಜನ ಗೌಣವಾದುದು ಎಂದು ಆತನ ವಾದ.

ಈ ಎರಡು ವಿಭಿನ್ನ ದೃಷ್ಟಿಗಳು ಸ್ವಾರಸ್ಯವಾದುವು. ಒಂದು ಮದುವೆಯನ್ನು ಸಾಮಾಜಿಕ ಪ್ರವೃತ್ತಿಯೆಂದು ಕಾಣುತ್ತದೆ; ಇನ್ನೊಂದು ಅದನ್ನು ವೈಯಕ್ತಿಕ ಅಗತ್ಯವೆಂದು ಪರಿಗಣಿಸುತ್ತದೆ. ದಿಟವಾಗಿ ಎರಡೂ ದೃಷ್ಟಿಗಳು ಪರಸ್ಪರ ಪೂರಕಗಳು. ಬ್ರಿಫಾ, ಲೊವಿ. ರಿವರ್ಸ್. ರೇಡಿನ್ ಮೊದಲಾದವರು ಮದುವೆಯನ್ನು ಅಭ್ಯಾಸ ಮಾಡುವಲ್ಲಿ ಎರಡೂ ದೃಷ್ಟಿಗಳನ್ನು ಅಳವಡಿಸಿಕೊಂಡರು. ದೇಶ ದೇಶಗಳಲ್ಲಿ ಪ್ರಚುರವಾಗಿರುವ ಪದ್ಧತಿಗಳನ್ನೂ. ಕಾಲಕಾಲಕ್ಕೆ ಮದುವೆಯ ವ್ಯವಸ್ಥೆಯಲ್ಲಿ ಒದಗಿಬಂದ ಮಾರ್ಪಾಟುಗಳನ್ನೂ, ವ್ಯಕ್ತಿಗಳ ಅಗತ್ಯ ಮತ್ತು ಪೂರೈಕೆಗಳನ್ನೂ ಇವರು ಸಾಮಾಜಿಕ ನೆಲೆಯಲ್ಲಿಯೂ ಮನೋವೈಜ್ಞಾನಿಕ ನೆಲೆಯಲ್ಲಿಯೂ ಅನುಸಂಧಾನ ಮಾಡಿದ್ದಾರೆ. ಇದರಿಂದಾಗಿ ಹಲವಾರು ಮೂಲಭೂತವಾದ ವಿವರಗಳು ದೊರಬಿದ್ದಿವೆ: ಅನುಸಂಧಾನದ ಸಂವಿಧಾನವೂ ಸ್ಪಷ್ಟವಾಗಿದೆ.

ಎಲ್ಲ ಪ್ರಾಣಿಗಳಲ್ಲಿಯೂ ಲೈಂಗಿಕ ಸಮಸ್ಯೆ ಮುಖ್ಯವಾದುದು; ಅದಿಲ್ಲದೆ ಸಂತಾನವಿಲ್ಲ. ಸಂತಾನವಿಲ್ಲದೆ ವಂಶ ಉಳಿಯುವುದಿಲ್ಲ. ವಂಶಸಂರಕ್ಷಣೆಯೂ ಆತ್ಮಸಂರಕ್ಷಣೆಯಂತೆಯೇ ಮೂಲಭೂತವಾದ ಪ್ರವೃತ್ತಿ. ವ್ಯಕ್ತಿಯು ತಾನು ಬದುಕಬೇಕೆಂದು ಹಂಬಲಿಸುವಂತೆಯೇ ಜನಾಂಗವು ತಾನು ಮುಂದುವರಿಯಬೇಕೆಂದು ಪ್ರಯತ

ಪಡುತ್ತದೆ. ಈ ಪ್ರಯತ್ನದ ಫಲವೇ ಸಮಾಜ. ಸಮಾಜದ ಎಲ್ಲ ಘಟಕಗಳೂ. ವ್ಯವಹಾರಗಳೂ ಈ ಉದ್ದೇಶವನ್ನು ಮುಂದೆ ಮಾಡಿಕೊಂಡೇ ಇರುವುವು. ಸಮಾಜದ ಹಿತದ ಚೌಕಟ್ಟಿನೊಳಗೆ ವ್ಯಕ್ತಿಯ ಹಿತವನ್ನು ಸಾಧಿಸುವುದಾದರೆ ಸರಿ: ಸಮಾಜದ ಹಿತವನ್ನು ವ್ಯಕ್ತಿಯ ಹಿತ ವಿರೋಧಿಸುವುದಾದರೆ 'ತ್ಯಜೇದೇಕಂ ಕುಲಸ್ಯಾರ್ಥೇ'. ವ್ಯಕ್ತಿಯು ತನ್ನ ವೈಯಕ್ತಿಕ ಹಿತವನ್ನು ಮರೆತು, ಅಥವಾ ತಡೆಹಿಡಿದು. ಸಮಾಜದ ಹಿತದಲ್ಲಿ ಪಾಲುಗೊಳ್ಳಬೇಕು; ಹಾಗಿಲ್ಲವಾದರೆ ವ್ಯಕ್ತಿಯು ಸ್ವಾತಂತ್ರ್ಯಕ್ಕೂ ಸುಖಕ್ಕೂ, ಕಡೆಗೆ ಜೀವನಕ್ಕೂ. ಸಂಚಕಾರ ಒದಗುತ್ತದೆ.

ಸಮಾಜದಲ್ಲಿ ಸೇರಿರುವ ಎಲ್ಲ ಪ್ರಾಣಿಗಳಿಗೂ ಸಮಾನವಾದ ಸಮಸ್ಯೆ ಇದು. ಸಮಾಜದ ಹಿತಕ್ಕಾಗಿ ವ್ಯಕ್ತಿಯು ಸುಖವನ್ನು ತಡೆಹಿಡಿಯಬೇಕು, ಎನ್ನುವ ಸಾಮಾಜಿಕ ಪ್ರವೃತ್ತಿಯನ್ನು ಚಿಕ್ಕಂದಿನಿಂದಲೂ ವ್ಯಕ್ತಿಯು ಒಳಮಾಡಿಕೊಂಡೇ ಬೆಳೆಯುವುದು. ಮನುಷ್ಯರ ಸಮಾಜ ವ್ಯವಸ್ಥೆಯಲ್ಲಿ ವ್ಯಕ್ತಿಯ ಆಚಾರ ವ್ಯವಹಾರಗಳ ಬಗ್ಗೆ ಇರುವ ನಿರ್ಬಂಧ. ನಿಷೇಧ. ನಿರೋಧಗಳಿಗೆ ಇದೇ ಕಾರಣ. ಲೈಂಗಿಕ ಪ್ರವೃತ್ತಿಯಲ್ಲಿ ಮಾನವ ನೆಲೆ ಉಳಿದ ಪ್ರಾಣಿಗಳ ನೆಲೆಗಿಂತ ಬೇರೆಯಾಗಿರುವುದು ಹೀಗೆಯೇ. ಮನುಷ್ಯ ಸಂಸ್ಕೃತಿಯ ಜಾಡಿನಲ್ಲಿ ಸಿಕ್ಕೊಡನೆ ಅವನ ಲೈಂಗಿಕ ಪ್ರವೃತ್ತಿ ಸ್ವಚ್ಛಂದವಾಗಿರುವುದು ತಪ್ಪಿ ಮರ್ಯಾದೆಯ ಮುಖವಾಡವನ್ನು ಧರಿಸುತ್ತದೆ. ಸಮಾಜದ ಅನುಮೋದನೆಯನ್ನು ನಿರೀಕ್ಷಿಸಿ ನಡೆದುಕೊಳ್ಳುತ್ತದೆ. ಹೀಗೆ ಮಾಡುವಾಗ ಪದ್ಧತಿಗಳು ಮೂಡಿಕೊಳ್ಳುತ್ತವೆ.

ಒಂದೊಂದು ದೇಶದಲ್ಲಿ, ಒಂದೊಂದು ಪರಿಸರದಲ್ಲಿ ಸಮಾಜ ಜೀವನದ ಅಗತ್ಯಗಳು. ಧೋರಣೆಗಳು ಒಂದೊಂದು ಬಗೆಯಾಗಿರುತ್ತವೆಯಲ್ಲವೆ? ಎಸ್ಕಿಮೋ ಜನರಿದ್ದಂತೆ ಆಫ್ರಿಕದ

ಕಾಡು ಜನ ಇರುವುದು ಸಾಧ್ಯವಿಲ್ಲ. ಮರಳುಗಾಡಿನ ಜನರಿರುವಂತೆ ಬೆಟ್ಟಗುಡ್ಡಗಳ ಜನ ಇರುವುದಿಲ್ಲ; ವ್ಯವಸಾಯವೇ ವೃತ್ತಿಯಾದ ಜನ ಇರುವಂತೆ ಉದ್ಯಮ-ಕಾರ್ಮಿಕರು ಇರುವುದಿಲ್ಲ. ಬದುಕಿನ ಸಂದರ್ಭಗಳೇ ಬೇರೆ ಬೇರೆ, ಹೊರಗಿನ ಒತ್ತಡಗಳೇ ಬೇರೆ ಬೇರೆ. ಸಂದರ್ಭ, ಒತ್ತಡಗಳನ್ನನುಸರಿಸಿ ವ್ಯಕ್ತಿಯ ವಿಚಾರವೂ, ವ್ಯವಹಾರವೂ ಮಾರ್ಪಡುತ್ತವೆ. ಕಾಲ ಬದಲಾದಂತೆ ಈ ಸಂದರ್ಭಗಳೂ ಒತ್ತಡಗಳೂ ಬೇರೆ ಬೇರೆಯಾಗುವುದು ಇನ್ನೊಂದು ವಿವರ. ಹೀಗೆ ವ್ಯಕ್ತಿಯ ಜೀವನದಲ್ಲಿ ದೇಶ-ಕಾಲ ಎರಡೂ ಕೆಲಸಮಾಡುತ್ತವೆ.

ಪ್ರಪಂಚದ ಬೇರೆ ಬೇರೆ ಜನಾಂಗಗಳಲ್ಲಿ ಮದುವೆಯ ಪದ್ಧತಿಗಳು ಬೇರೆ ಬೇರೆಯಾಗಿದ್ದರೆ, ಅವು ಕಾಲಕಾಲಕ್ಕೆ ಮಾರ್ಪಡುತ್ತಾ ಬಂದಿದ್ದರೆ ಆಶ್ಚರ್ಯವೇನಿಲ್ಲ. ಸಂತಾನ ಕ್ರಿಯೆ, ವಂಶಾಭಿವೃದ್ಧಿ. ಮಾನವ ಜನಾಂಗದ ಉಳಿಕೆ ಇವು ಮೂಲಭೂತವಾದ, ಎಲ್ಲ ಪದ್ಧತಿಗಳಿಗೆ ಸಾಮಾನ್ಯವಾದ ವಿವರಗಳಾದರೂ ಕುಟುಂಬದ ರಚನೆ ಆಯಾ ದೇಶ-ಕಾಲಗಳ ಅಗತ್ಯಗಳಿಗೆ ಅನುಸಾರವಾಗಿರುವುದು ಸಹಜವೇ. ಕುಟುಂಬದ ಸಾಮಾಜಿಕ, ಧಾರ್ಮಿಕ, ಮಾನಸಿಕ ಮುಖಗಳು ಹೀಗೆ ಸಂದರ್ಭದ, ಪರಿಸರದ, ವಿಕಾಸ ಸ್ತರದ ದೃಷ್ಟಿಗಳಿಂದ ವಿಭಿನ್ನವಾಗಿರುವುದು, ವಿವಿಧವಾಗಿರುವುದು ಕಾಣಬರುತ್ತದೆ. ಇದನ್ನು ಸಮಾಜ ವಿಜ್ಞಾನಿಗಳೂ ಮನೋವಿಜ್ಞಾನಿಗಳೂ ಗಮನಿಸಿದ್ದಾರೆ.

ಸಮಾಜದ ಪ್ರಚೋದನೆ. ಕುಟುಂಬದ ಪ್ರತಿಕ್ರಿಯೆ ಇವುಗಳಲ್ಲಿ ಸಾಧರ್ಮ್ಯವಿರುವುದು ಸಹಜವೇ. ಪರಿಸರದ ಪ್ರಚೋದನೆಯು ವ್ಯಕ್ತಿಯ ಪ್ರತಿಕ್ರಿಯೆಯನ್ನು ನಿರ್ಧರಿಸುವಂತೆಯೇ ಇಲ್ಲಿಯೂ ನಡೆಯುತ್ತದೆ. ಕುಟುಂಬವೆನ್ನುವುದು ಹಲವಾರು ವ್ಯಕ್ತಿಗಳ

ಸಂಘಾತವಾದರೂ ಸಾಮಾಜಿಕ ನೆಲೆಯಲ್ಲಿ ಅದು ಏಮ್ಮುಖವಾಗಿ ವ್ಯವಹರಿಸುತ್ತದೆ. ವಿಭಿನ್ನ ಹಿನ್ನೆಲೆಗಳ ಸ್ತ್ರೀಪುರುಷರು ದಂಪತಿಗಳಾಗಿ. ನಿಸರ್ಗ ವ್ಯಾಪಾರದಿಂದ ಕಾಣಿಸಿಕೊಳ್ಳುವ ಹಸುಳೆಗಳು ಹೊಸವ್ಯಕ್ತಿಗಳಾದರೂ ದಂಪತಿಗಳ ಮಕ್ಕಳಾಗಿ ಒಂದೇ ಕುಟುಂಬದಲ್ಲಿ ಸೇರಿ ನಿಲ್ಲುವುದು ಸ್ವಾರಸ್ಯವಾದ ವಿವರ. ವ್ಯಕ್ತಿಗಳು ಹಲವರಾದರೂ. ಅವರವರ ವ್ಯಕ್ತಿತ್ವಗಳು ಬೇರೆ ಬೇರೆಯಾದರೂ ಕುಟುಂಬದಲ್ಲಿ ಕೂಡಿದ ಮೇಲೆ ಅನ್ಯೋನ್ಯವಾಗಿರುವಾಗ ಅವರೆಲ್ಲರ ನೆಲೆ ಒಂದಾಗುತ್ತದೆ, ಪ್ರತಿಷ್ಠಾನ ಒಂದಾಗುತ್ತದೆ; ಸಾಮೀಪ್ಯದಿಂದಾಗಿ. ಸಹಕಾರದಿಂದಾಗಿ ಸಾಧರ್ಮ್ಯ ಒದಗುತ್ತದೆ, ಸಹಾನುಭೂತಿ ತಲೆದೋರುತ್ತದೆ; ಸಾಧರ್ಮ್ಯವೂ ಸಹಾನುಭೂತಿಯೂ ತೀವ್ರವಾದಾಗ ತಾದಾತ್ಮ್ಯವೂ ಒದಗಿಬರುತ್ತದೆ. 'ನಾವೆಲ್ಲ ಒಂದು' ಎನ್ನುವ ಭಾವನೆಯೇ ಕುಟುಂಬದ ಆಧಾರ.

'ನಾವೆಲ್ಲ ಒಂದು' ಎಂದ ಮಾತ್ರಕ್ಕೆ ಎಲ್ಲರ ಕೆಲಸವೂ ಒಂದೇ ಎಂದಲ್ಲ. ಎಲ್ಲರ ಮನೋಧರ್ಮವೂ ಒಂದೇ ಎಂದಲ್ಲ. 'ನಮ್ಮೆಲ್ಲರ ಆಶಯ ಒಂದು. ನಮ್ಮೆಲ್ಲರ ಲಕ್ಷ್ಯ ಒಂದು. ನಾವೆಲ್ಲರೂ ಬಯಸುವುದು ನಮ್ಮೆಲ್ಲರ ಹಿತವನ್ನು' ಎಂದು. ಸಮಾಜದ ಜಾಲದಲ್ಲಿ ಕುಟುಂಬಗಳು ಪ್ರತ್ಯೇಕವಾಗಿ ಉಳಿಯುತ್ತವೆ; ಒಂದು ಕುಟುಂಬ ಇನ್ನೊಂದು ಕುಟುಂಬದಿಂದ ಬೇರೆಯಾಗಿ ನಿಲ್ಲುತ್ತದೆ. ಸಮಾಜವನ್ನು ವಿಶ್ಲೇಷಿಸಿದರೆ. ಅಥವಾ ಯಾವುದಾದರೂ ಕಾರಣದಿಂದ ಸಮಾಜ ಒಡೆದರೆ. ಉಂಡುಂಡೆಯಾಗಿ ಉಳಿಯುವ ಚೂರುಗಳು ವ್ಯಕ್ತಿಗಳಲ್ಲ, ಕುಟುಂಬಗಳು. ಈ ಕಾರಣದಿಂದ ಕುಟುಂಬವನ್ನು ಸಮಾಜದ 'ಯೂನಿಟ್' ಎಂದು ವ್ಯವಹರಿಸುತ್ತಾರೆ. ಇಲ್ಲಿ ಯೂನಿಟ್ ಎಂದರೆ ಅವಿಭಾಜ್ಯವಾದ ಅಣು ಎಂದಲ್ಲ. ಇದರಲ್ಲಿ ಹಲವಾರು ವಿಭಿನ್ನ ವ್ಯಕ್ತಿಗಳು ಕಲೆತಿರುತ್ತಾರೆ, ಅವರವರ ವ್ಯಕ್ತಿತ್ವ

ಗಳು ವಿಭಿನ್ನವಾಗಿಯೇ ಇರುತ್ತವೆ. ಆದರೆ ಕುಟುಂಬದ ಸಂದರ್ಭ ದಲ್ಲಿಯೇ ಇವರ ನೆಲೆ, ಇವರ ಮೌಲ್ಯ; ಇವರ ಕೆಲಸಗಳೆಲ್ಲ ಸಾರ್ಥಕವಾಗುವುದು ಈ ಸಂದರ್ಭದಲ್ಲಿ ಮಾತ್ರ. ಸಂದರ್ಭವನ್ನು ಬಿಟ್ಟರೆ ವ್ಯಕ್ತಿಗಳು ಬಲಹೀನರಾಗುತ್ತಾರೆ. ಅವರ ಮಾತುಕತೆಯೆಲ್ಲ ನಿರರ್ಥಕವಾಗುತ್ತದೆ. ಕುಟುಂಬದ ಹೊರಗೆ ವ್ಯಕ್ತಿಗಳ ಮೌಲ್ಯ ವಿಲ್ಲ. ವ್ಯಕ್ತಿಗಳಿಲ್ಲದೆ ಕುಟುಂಬವಿಲ್ಲ ಎನ್ನುವುದು ದಿಟವಾದರೂ ಕುಟುಂಬವಿಲ್ಲದೆ ವ್ಯಕ್ತಿಗೆ ಕಳೆಯಿಲ್ಲ: ವ್ಯಕ್ತಿಯ ವ್ಯಕ್ತಿತ್ವಕ್ಕೆ ಕುಟುಂ ಬವೇ ಆಧಾರ. ಆಹಾರ. ವ್ಯಕ್ತಿಯು ವ್ಯಕ್ತಿಯಾಗಿ ಉಳಿಯುವುದು ತನ್ನ ವ್ಯಕ್ತಿತ್ವವನ್ನು ಕುಟುಂಬದೊಳಗೆ ಸೇರಿಸಿದಾಗಲೇ. ಇಂಥ ವ್ಯಕ್ತಿ–ಸಮಷ್ಟಿಯನ್ನು ಮನೋವಿಜ್ಞಾನಿಗಳು 'ಗೆಸ್ಟಾಲ್ಟ್' ಎಂದು ಕರೆದಿದ್ದಾರೆ. ಕುಟುಂಬವೊಂದು ಗೆಸ್ಟಾಲ್ಟ್: ಹಲವಾರು ಕುಟುಂಬ ಗಳು ಕಲಿತು ಒಂದು ನೆರೆ (ನೈಬರ್‌ಹುಡ್) ಆದರೆ ಅದು ಗೆಸ್ಟಾಲ್ಟ್. ಏಕೆಂದರೆ ಕುಟುಂಬಗಳಿಗೆ ಪ್ರೇರಕ ಸಾಮಗ್ರಿ, ಪೋಷಕ ಸಾಮಗ್ರಿ ದೊರೆಯುವುದು ನೆರೆಯಿಂದಲೇ. ಹಲವಾರು ನೆರೆಗಳು ಸೇರಿ ಸಮುದಾಯ (ಕಮ್ಯೂನಿಟಿ) ವಾದರೆ ಅದೊಂದು ಗೆಸ್ಟಾಲ್ಟ್.

ಹೀಗೆಯೇ ಪ್ರಾಂತ್ಯ, ರಾಷ್ಟ್ರ. ಮಾನವಕೋಟಿ ಎಲ್ಲವೂ ಒಂದೊಂದು ಗೆಸ್ಟಾಲ್ಟ್. ಇವಕ್ಕೆಲ್ಲ ಮೂಲಭೂತವಾದುದು ಕುಟುಂಬ—ಗೆಸ್ಟಾಲ್ಟ್. ಕುಟುಂಬದಲ್ಲಿರುವ ವ್ಯಕ್ತಿಗಳು ಒಟ್ಟಿಗೆ, ಒಮ್ಮುಖವಾಗಿ, ಪರಸ್ಪರ ಸಂಬಂಧವನ್ನು ಬೆಳೆಸಿಕೊಂಡು ಕಲಿಯು ತ್ತಾರೆ; 'ನೀನೂ, ನಾನೂ ಸೇರಿ ನಾವು: ನನ್ನದೂ ನಿನ್ನದೂ ಸೇರಿ ನಮ್ಮದು' ಎನ್ನುವ ಕಲ್ಪನೆ ಬೇರೂರಬೇಕಾದರೆ ವಿಶೇಷವಾದ ಸಂಯೋಗ ಅಗತ್ಯ: ವ್ಯಕ್ತಿಗಳ ನಡುವೆ ಇರುವ ಸಂಬಂಧ ವಿಶಿಷ್ಟವಾಗಿರಬೇಕು. ಕುಟುಂಬಕ್ಕಿರುವ ವೈಶಿಷ್ಟ್ಯ ಈ ವಿಶೇಷ

ವಾದ ಸಂಬಂಧದಿಂದಲೇ ಒದಗಿಬರುತ್ತದೆ. ವ್ಯಕ್ತಿಗಳಿಗಿಂತ ವ್ಯಕ್ತಿಗಳ ನಡುವೆ ಇರುವ ಸಂಬಂಧ ಮುಖ್ಯವಾದುದು. ಕುಟುಂಬವು ವ್ಯಕ್ತಿಗಳ ಒಕ್ಕೂಟ ಎನ್ನುವುದಕ್ಕಿಂತ ಈ ಸಂಬಂಧಗಳ ಸಂಶ್ಲಿಷ್ಟ ಜಾಲಕ ಎಂದರೆ ಸರಿಯಾದೀತು. ಕುಟುಂಬದ ರಚನೆ ಸಂಬಂಧ ಪ್ರಮುಖವಾದುದು; ಸಂಬಂಧಗಳೇ ಕುಟುಂಬದ ಜೀವಾಳ.

ವ್ಯಕ್ತಿಗಳನ್ನು ಬಿಟ್ಟು ಸಂಬಂಧವೆಲ್ಲಿಯದು ? ವ್ಯಕ್ತಿಗಳಿದ್ದರೇ ಸಂಬಂಧ, ನಿಜ. ಆದರೆ ವ್ಯಕ್ತಿಗಳಿಗೆ ಸಂಸ್ಕಾರವನ್ನೊದಗಿಸಿ, ಅವರ ಪ್ರವೃತ್ತಿಗಳನ್ನು ಮಾರ್ಪಡಿಸಿ, ಅವರ ಮನೋಧರ್ಮವನ್ನು ನಿರ್ದೇಶಿಸುವುದು ಸಂಬಂಧದ ಕೆಲಸ. ವ್ಯಕ್ತಿಗಳನ್ನು ಸಂಬಂಧ ಎಷ್ಟು ಅವಲಂಬಿಸುತ್ತದೆಯೋ, ವ್ಯಕ್ತಿಯು ಸಂಬಂಧಗಳನ್ನು ಅಷ್ಟೇ ಅವಲಂಬಿಸುತ್ತಾನೆ. ಮನುಷ್ಯನ ಎಲ್ಲ ವ್ಯವಹಾರಗಳೂ, ಪ್ರವೃತ್ತಿಗಳೂ, ಪ್ರತಿಕ್ರಿಯೆಗಳೂ, ಕಲ್ಪನೆಗಳೂ ಹೀಗೆ ಸಮಾಜದ ನೆಲೆಯಲ್ಲಿ ಮೂಡಿಬಂದ ಸಂಬಂಧಗಳನ್ನವಲಂಬಿಸುತ್ತವೆ. ಕೌಟುಂಬಿಕ ಜೀವನವಂತೂ ಸಂಬಂಧಸಮವಾಯ.

ಸಂಬಂಧಗಳು ವಿಭಿನ್ನವಾದುವು, ಬೇರೆ ಬೇರೆ ಪ್ರಯೋಜನ ಗಳನ್ನು ಪಡೆದಿರುವುವು, ಬೇರೆ ಬೇರೆ ಸಂದರ್ಭಗಳನ್ನು ಒಳಗೊಂಡಿ ರುವುವು. ಜೀವನವೆನ್ನುವುದು ಇಂಥ ಅಸಂಖ್ಯಾತ ಸಂಬಂಧಗಳ ಅವಿರತ ಸಂತತಿ. ಬದುಕಿನ ಪ್ರತಿ ಗಳಿಗೆಯಲ್ಲಿಯೂ, ನಾವು ಮಾಡುವ ಒಂದೊಂದು ಕೆಲಸದಲ್ಲಿಯೂ ಹತ್ತಾರು, ನೂರಾರು, ಸಾವಿರಾರು ಸಂಬಂಧಗಳು ಸಮುದ್ರದ ಅಲೆಗಳಂತೆ ಮತ್ತೆ ಮತ್ತೆ ಮೇಲೇರಿ ಬರುತ್ತವೆ. ಕುಟುಂಬವೆನ್ನುವುದು ಈ ಅಲೆಗಳ ವಿರಳಿತವೇ. ಅಲೆಗಳಿಗೆ ಒಂದು ಅಧಿಷ್ಠಾನ ಬೇಡವೇ? ಮೇಲೇರಿ ಬರುವುದಕ್ಕೆ ನೆಲ ಬೇಡವೇ? ಕುಟುಂಬವು ಸಂಬಂಧಗಳ ಸಂಘಾತ

ವಾದರೆ, ಈ ಸಂಬಂಧಗಳಿಗೆ ಆಶ್ರಯವಾಗಿರುವುದು, ವಿಭಿನ್ನ ಸಂಬಂಧಗಳಿಗೆ ಸೂತ್ರಪ್ರಾಯವಾಗಿರುವುದು ದಾಂಪತ್ಯಸಂಬಂಧ. ಈ ದಾಂಪತ್ಯಸಂಬಂಧ ಒದಗಿಬರುವುದು ಮದುವೆಯಿಂದ.

ಕುಟುಂಬದ ಕಟ್ಟಡಕ್ಕೆ ಮದುವೆ ಮಹಾದ್ವಾರ. ಕುಟುಂಬದಲ್ಲಿ ಕಾಣಬರುವ ಎಲ್ಲ ಸಂಬಂಧಗಳನ್ನೂ ನಿರ್ದೇಶಿಸುವುದು ಮದುವೆಯೇ. ಹಲವಾರು ವ್ಯಕ್ತಿಗಳನ್ನು ಒಂದು ಆರ್ಥಿಕ ನೆಲೆಯಲ್ಲಿ ನಿಲ್ಲಿಸಿ, ಅವರ ಸುತ್ತಲೂ ಸಾಮಾಜಿಕವಾದ, ಧಾರ್ಮಿಕವಾದ ಬಲೆಯನ್ನು ಹೆಣೆದು, ಅವರ ಬಾಳಿಗೊಂದು ಅರ್ಥವನ್ನೂ ಸಾರ್ಥಕತೆಯನ್ನೂ, ಸ್ವಾರಸ್ಯವನ್ನೂ ಒದಗಿಸಿ, ಕುಟುಂಬವನ್ನು ಸಾಮಾಜಿಕ ಸಂದರ್ಭಕ್ಕೆ ಸಂಯೋಜಿಸಿ ಅದರ ವೈಶಿಷ್ಟ್ಯವನ್ನು ಉಳಿಸಿಕೊಡುವುದು ಮದುವೆ. ಈ ದೃಷ್ಟಿಯಿಂದ ಮದುವೆಯು ಕುಟುಂಬದ ಪೂರ್ವಸಿದ್ಧತೆಯೆನ್ನಬಹುದು. ಮದುವೆಯಿಲ್ಲದೆ ಬದುಕನ್ನು ಸಾಗಿಸಿಕೊಂಡು ಹೋಗುವ ಜನಾಂಗ ಈಗ ಎಲ್ಲಿಯೂ ಕಾಣಿಸುವುದಿಲ್ಲ. ಆದಿ ಮಾನವರು ಕುಟುಂಬದ ಅಗತ್ಯವನ್ನೂ ಪ್ರಯೋಜನವನ್ನೂ ಅರಿತುಕೊಳ್ಳುವ ಮೊದಲು ಮದುವೆಯಾಗುತ್ತಿರಲಿಲ್ಲವೇನೋ! ಆದರೆ ಸಮಾಜದ, ಸಮುದಾಯದ ಕಲ್ಪನೆ ಮೂಡಿದೊಡನೆಯೇ ಕುಟುಂಬದ ಅಗತ್ಯವನ್ನು ಮನುಷ್ಯ ಕಂಡುಕೊಂಡ; ಕುಟುಂಬವನ್ನು ದೃಢವಾಗಿ, ಸುಸಂಗತವಾಗಿ ನಿಲ್ಲಿಸಲು ಮದುವೆಯು ಅಗತ್ಯವೆಂಬುದನ್ನು ಅವನು ಅರಿತುಕೊಂಡ. ಹೀಗಾಗಿ, ಮಾನವನ ಸಂಸ್ಕೃತಿ ಎಷ್ಟು ಪ್ರಾಚೀನವೋ ಮದುವೆಯೂ ಅಷ್ಟೇ ಪ್ರಾಚೀನವೆಂದು ತಿಳಿದುಬಂದಿದೆ.

ಕುಟುಂಬದ ವ್ಯವಸ್ಥೆಯಿಲ್ಲದ ಸಮಾಜದ ರಚನೆ ಪ್ರಪಂಚದ ಯಾವ ಭಾಗದಲ್ಲಿಯೂ, ಯಾವ ಕಾಲದಲ್ಲಿಯೂ ಇಲ್ಲ. ಮದುವೆಯನ್ನು ಬಿಟ್ಟು ಕುಟುಂಬದ ವ್ಯವಸ್ಥೆ ಎಲ್ಲಿಯೂ ನಡೆಯು

ವುದಿಲ್ಲ. ಎಂದೂ ನಡೆದಿಲ್ಲ. ಆದರೆ ಅಲ್ಲಲ್ಲಿಯ, ಆಗಾಗಿನ ಜನಸಮುದಾಯದ ಅಗತ್ಯಗಳನ್ನನುಸರಿಸಿ ಕುಟುಂಬದ ಸ್ವರೂಪ, ಸ್ವಭಾವಗಳು ಸಿದ್ಧವಾಗುತ್ತವೆ; ಇಲ್ಲಿ ವೈವಿಧ್ಯ ಅನಿವಾರ್ಯ. ಈ ವೈವಿಧ್ಯಕ್ಕನುಗುಣವಾಗಿ ಮದುವೆಯ ಸಂವಿಧಾನಗಳೂ ಮಾರ್ಪಡುತ್ತವೆ, ಪದ್ಧತಿಗಳೂ ಬೇರೆ ಬೇರೆಯಾಗುತ್ತವೆ. ಪದ್ಧತಿಗಳನ್ನು ಪರಿಶೀಲಿಸಿದರೆ ಸಾಮಾಜಿಕ ಅಗತ್ಯಗಳೂ ಮೌಲ್ಯಗಳೂ ಸ್ಪಷ್ಟವಾಗುತ್ತವೆ. ಈ ಪದ್ಧತಿಗಳು ಬೆಳೆದುಬಂದ ಬಗೆಯನ್ನೂ ಗಮನಿಸಬೇಕು: ಬದಲಾಗುತ್ತಿರುವ ಸಮಾಜದ ಪ್ರತಿಕೃತಿ ಇಲ್ಲಿ ದೊರಕುತ್ತದೆ.

ಪ್ರಪಂಚದ ವಿವಿಧ ರಾಷ್ಟ್ರಗಳಲ್ಲಿ ಆದಿವಾಸಿಗಳೆನ್ನಬಹುದಾದ ಜನರ ವೈವಾಹಿಕ ಪದ್ಧತಿಗಳನ್ನು ಬ್ರಿಫಾ, ರಿವರ್ಸ್ ಮೊದಲಾದವರು ಅಧ್ಯಯನ ಮಾಡಿ ಹಲವಾರು ಸ್ವಾರಸ್ಯವಾದ ವಿವರಗಳನ್ನು ಸಂಗ್ರಹಿಸಿದ್ದಾರೆ. ಏಕಪತ್ನೀವ್ರತ, ಯುಗಳ ವಿವಾಹ, ಗೋಷ್ಠೀ ವಿವಾಹ, ತಾತ್ಕಾಲಿಕ ವಿವಾಹ, ಪ್ರಾಯೋಗಿಕ ವಿವಾಹ, ಬಹುಪತ್ನೀತ್ವ, ಅನೇಕಪತಿ ಪದ್ಧತಿ, ಉಪಪತ್ನೀ ಸೌಲಭ್ಯ, ಸ್ವಚ್ಛಂದ ಸಂಭೋಗ, ಗಣಿಕಾ ಪ್ರಣಯ, ವಿವಾಹ ವಿಚ್ಛಿತ್ತಿ, ಲೈಂಗಿಕ ತೃಪ್ತಿ, ಪ್ರತಿಷ್ಠಾಲಬ್ಧಿ, ಆರ್ಥಿಕ ವ್ಯವಸ್ಥೆ, ಪ್ರೇಮ ಪ್ರವೃತ್ತಿ ಮೊದಲಾದ ವಿವರಗಳ ಬಗ್ಗೆ ವಿಪುಲವಾದ ಬೆಳಕನ್ನು ಚೆಲ್ಲಿದ್ದಾರೆ. ನಮ್ಮ ದೇಶದಲ್ಲಿಯೂ ನೂರಾರು ಆದಿವಾಸಿ ಜನರ ತಂಡಗಳಿವೆ; ಇವರ ವೈವಾಹಿಕ ಜೀವನದ ವಿಚಾರವಾಗಿಯೂ ಅಷ್ಟಿಷ್ಟು ಅಧ್ಯಯನ ನಡೆದಿದೆ. ಆದರೆ ನಡೆದಿರುವುದು ತೀರಾ ಕಡಮೆ. ನಡೆದಿರುವಷ್ಟು ಅಧ್ಯಯನವೂ ಸಾಮಾಜಿಕ ಮನೋವೈಜ್ಞಾನಿಕ ನೆಲೆಗಳಲ್ಲಿ ನಡೆದಿಲ್ಲವೆನ್ನುವುದು ಕೊರತೆ.

ಆದಿವಾಸಿಗಳೇನು, ನಮ್ಮ ದೇಶದಲ್ಲಿರುವ ಸುಸಂಸ್ಕೃತ

ಜನಾಂಗಗಳ ಸಂಖ್ಯೆಯೇ ಸಾವಿರವನ್ನು ಮೀರುತ್ತದೆ. ವೈವಿಧ್ಯವೇ ನಮ್ಮ ದೇಶದ ವೈಶಿಷ್ಟ್ಯವಲ್ಲವೇ? ಇವರಲ್ಲೆಲ್ಲ ಪ್ರಚಲಿತವಾಗಿರುವ ವಿವಾಹ ಪದ್ಧತಿಗಳನ್ನು ಪರಿಶೀಲಿಸಿದರೆ ನಮ್ಮ ಸಮಾಜ ನಡೆದು ಬಂದಿರುವ ದಾರಿಯನ್ನು ಗುರುತಿಸಬಹುದು. ನಾವು ಉಳಿಸಿ ಕೊಳ್ಳಲು ಹೆಣಗಾಡುತ್ತಿರುವ ಮೌಲ್ಯಗಳನ್ನು ತಿಳಿಯಬಹುದು. ಹತ್ತಾರು ಪ್ರಾಂತ್ಯಗಳಲ್ಲಿ ಸಾಮಾಜಿಕ ಅಗತ್ಯಗಳೂ ಪರಿಸರದ ಒತ್ತಡಗಳೂ ಬೇರೆ ಬೇರೆಯಾಗಿರುವುದು ಈ ಪದ್ಧತಿಗಳಲ್ಲಿ ಕಾಣ ಸಿಗುತ್ತದೆ. ಧರ್ಮದ ನೆಲೆಯಲ್ಲಿ ಸಾಮಾಜಿಕ ಮೌಲ್ಯಗಳು ಬೆಳೆಯುವ ಬಗೆಯನ್ನು ಇಲ್ಲಿ ಕಾಣಬಹುದು.

ಆದಿವಾಸಿ-ಪ್ರಬುದ್ಧ ಎನ್ನುವ ಭೇದ ಇಂಥ ವಿಚಾರಗಳಲ್ಲಿ ಅಷ್ಟಾಗಿ ಸಾಧುವಲ್ಲ. ಅತಿ ಪ್ರೌಢರೆನಿಸಿಕೊಳ್ಳುವ ಜನರ ನಡವಳಿಕೆ ಯಲ್ಲಿಯೂ ಅನಾಗರಿಕವೆನ್ನಬಹುದಾದ ಅಂಶಗಳಿದ್ದೇ ಇರುತ್ತವೆ: ಹಿಂದುಳಿದವರೆಂದು ಕರೆಸಿಕೊಳ್ಳುವವರಲ್ಲಿ ಅತಿ ನವ್ಯ, ಸುಸಂಸ್ಕೃತ ವೆನ್ನಬಹುದಾದ ವಿವರಗಳನ್ನು ಕಾಣುತ್ತೇವೆ. ನೀತಿಯ ನೆಲೆಯಿಂದ ಸಾಮಾಜಿಕ ವಿವರಗಳನ್ನು ಅಳೆಯುವುದು ತಪ್ಪಾಗಬಹುದು. ನೀತಿಯೂ ಸಾಮಾಜಿಕ ಒತ್ತಡದಿಂದಲೇ ಎದ್ದು ಬಂದುದು ಎನ್ನುವುದನ್ನು ಮರೆಯಬಾರದು. ಒಂದು ಕಾಲಕ್ಕೆ ನೈತಿಕ ವಾದುದು ಮತ್ತೊಂದು ಕಾಲಕ್ಕೆ ಅನೈತಿಕವೆನಿಸಬಹುದು; ಒಂದು ದೇಶದಲ್ಲಿ ಸಭ್ಯ. ಸಂಗತ ಎಂದುದು ಇನ್ನೊಂದರಲ್ಲಿ ಅಸಭ್ಯ. ಅಸಂಗತವಾಗಬಹುದು. ಇದರಲ್ಲಿ ಸಮ್ಮತ-ಅಸಮ್ಮತ. ಉಚ್ಚ-ನೀಚ. ಮೇಲು-ಕೀಳು ಎನ್ನುವ ಕಲ್ಪನೆಗಳಿಗೆ ಬೆಲೆಯಿಲ್ಲ. ಮುಖ್ಯ ವಾದುದು ಪರಿಸರದ ಒತ್ತಡ. ಸಂದರ್ಭದ ಅಗತ್ಯ. ದೇಶ-ಕಾಲಗಳಿಗೆ ಹೊಂದಿಕೊಂಡೇ ಬದುಕಿನ ಎಲ್ಲ ವ್ಯಾಪಾರಗಳೂ ನಡೆಯುವುದು.

ಈ ದೃಷ್ಟಿಯಿಂದ ಪ್ರಸ್ತುತ ಪುಸ್ತಕದಲ್ಲಿ ಹಲವಾರು ವಿವಾಹ ಪದ್ಧತಿಗಳನ್ನು ಸಂಗ್ರಹಿಸಲಾಗಿದೆ; ಪರಿಶೀಲಿಸುವುದಾಗಿಲ್ಲ. ಪರಿಶೀಲನೆಗೆ ಪೂರ್ವಭಾವಿಯಾಗಿ ವಿವರಗಳು ಒದಗಬೇಕು. ಸಮಾಜದ ಮತ್ತು ಮನೋವಿಜ್ಞಾನದ ವಿದ್ಯಾರ್ಥಿಗಳಿಗೆ ಸ್ವಾರಸ್ಯವೆನಿಸುವ, ಉಪಯುಕ್ತವಾಗುವ ವಿವರಗಳಲ್ಲಿ ಕೆಲವನ್ನು ಇಲ್ಲಿ ಕಲೆ ಹಾಕುವ ಪ್ರಯತ್ನ ನಡೆದಿದೆ. ಅದರಿಂದ ವಿವೇಚನೆಗೂ, ವಿಮರ್ಶೆಗೂ, ಸಿದ್ಧಾಂತ ಪರಾಮರ್ಶೆಗೂ ನೆರವಾಗುವುದಾದರೆ ಈ ಪ್ರಯತ್ನ ಸಾರ್ಥಕವಾಯಿತೆಂದುಕೊಳ್ಳುತ್ತೇನೆ.

## 2. ವಿವಾಹ ಭೂಮಿಕೆ

ಉಪನಿಷತ್ತಿನ ಆದೇಶಗಳಲ್ಲೊಂದು, ಉಪದೇಶಗಳಲ್ಲೊಂದು 'ಸಂತಾನದ ಎಳೆಯನ್ನು ಕಡಿಯಬಾರದು' (ಪ್ರಜಾತಂತುಂ ಮಾ ವ್ಯವಚ್ಛೇತ್ಸೀಃ) ಎಂಬುದು. ಇದು ನಿಸರ್ಗಸಿದ್ಧವಾದ ನಿಯಮವೂ ಹೌದು. ಜೀವದ ಪ್ರಮುಖ ಲಕ್ಷಣಗಳಲ್ಲಿ ಸಂತಾನಕ್ರಿಯೆಯೂ ಒಂದು. ಈ ನೈಸರ್ಗಿಕ ಲೈಂಗಿಕ ವ್ಯಾಪಾರವನ್ನು ಸಂಘಜೀವನದ ಪ್ರಯೋಜನಗಳಿಗೆ ಅಳವಡಿಸಿಕೊಳ್ಳುವ ಅಗತ್ಯ ಮೇಲು ಮಟ್ಟದ ಪ್ರಾಣಿಗಳಲ್ಲಿ ಕಂಡುಬರುತ್ತದೆ. ಒಂದು ದೃಷ್ಟಿಯಿಂದ ಸಂಭೋಗವೇ ದಾಂಪತ್ಯ ಜೀವನದ ಜೀವಸ್ವರೂಪವಾದರೂ ಪ್ರೇಮ, ಕೌಟುಂಬಿಕ ಧರ್ಮ, ಭಾರನಿರ್ವಹಣೆ, ಶಿಶುರಕ್ಷಣೆ ಮುಂತಾಗಿ ಹಲವಾರು ವಿವರಗಳು ಇಲ್ಲಿ ಸೇರಿಕೊಳ್ಳುತ್ತವೆ. ಮನುಷ್ಯನ ಮಟ್ಟದಲ್ಲಿ ಈ ಎಲ್ಲ ವಿಹಿತ ಅಗತ್ಯ ವಿವರಗಳೂ ಪರಿಷ್ಕೃತವಾಗಿ 'ಕುಟುಂಬ' ವೆಂಬ ಪ್ರಸಂಗವು ವ್ಯಕ್ತಿಯ ಅಸ್ತಿತ್ವವನ್ನು ಮೀರಿ ನಿಲ್ಲುತ್ತದೆ.

**ನಾಂದಿ**

ಕುಟುಂಬಕ್ಕೇ ವಿಶಿಷ್ಟವಾದ ಧರ್ಮಗಳುಂಟು: ವಿಧಿ ನಿಷೇಧಗಳುಂಟು: ಮರ್ಯಾದೆಯ ಪ್ರಕಾರಗಳುಂಟು. ವ್ಯಕ್ತಿಯ ಪ್ರವೃತ್ತಿಗಳ ಅಭಿವ್ಯಕ್ತಿಗೆ ನೆರವಾಗುವುದು ಕುಟುಂಬ ಜೀವನದ ಉದ್ದೇಶ ; ಹಾಗೆಯೇ ಸಂಘವು ನಿರಾತಂಕವಾಗಿ ಬೆಳೆಯಲೂ ಅದು ಎಡೆಮಾಡಿ ಕೊಡುತ್ತದೆ. ಇದಕ್ಕಾಗಿ ಸಂಘದ ಅನುಮೋದನೆಯಿಂದ ಕುಟುಂಬ ಜೀವನ ಮನುಷ್ಯನ ಪ್ರಮುಖ ಪ್ರಯೋಜನಗಳಲ್ಲಿ ಒಂದೆಂದು ಪರಿಗಣಿತವಾಗಿದೆ. ಪ್ರಪಂಚದ ಎಲ್ಲೆಡೆಗಳಲ್ಲೂ ಕುಟುಂಬದ

ವಲಯದಲ್ಲೇ ಮನುಷ್ಯರು ಮೂಡಿ ಬಂದಿದ್ದಾರೆ. ಕುಟುಂಬವನ್ನು ಬಿಟ್ಟು ಮನುಷ್ಯ ಹುಟ್ಟುವ ಹಾಗಿಲ್ಲ, ಬೆಳೆಯುವ ಹಾಗಿಲ್ಲ, ಬಾಳುವ ಹಾಗಿಲ್ಲ. ಆರ್ಥಿಕವಾಗಿ, ಸಾಮಾಜಿಕವಾಗಿ, ಶೈಕ್ಷಣಿಕವಾಗಿ, ಸಾಂಸ್ಕೃತಿಕವಾಗಿ ಕುಟುಂಬ ಅಗತ್ಯವಾದುದು.

ಕುಟುಂಬದ ವ್ಯವಸ್ಥೆಯಲ್ಲಿ ವಿವಾಹವೇ ಭೂಮಿಕೆ. ಕುಟುಂಬ ನಾಟಕಕ್ಕೆ ಇದೇ ನಾಂದಿ. ಪ್ರಪಂಚದ ಎಲ್ಲ ಜನಾಂಗಗಳೂ ಎಲ್ಲ ಕಾಲಗಳಲ್ಲೂ ವಿವಾಹ ಸಂದರ್ಭವನ್ನು ಅಗತ್ಯವೆಂದು ಕಂಡುಕೊಂಡಿದ್ದಾರೆ. ವಿವಾಹವು ಬಳಕೆಯಲ್ಲಿ ಇಲ್ಲದ ಜನರೇ ಎಲ್ಲೂ ಇಲ್ಲ, ಯಾವ ಕಾಲದಲ್ಲೂ ಇರಲಿಲ್ಲ. ವಿವಾಹ ಇಲ್ಲದೆ ಕುಟುಂಬ ಮೈದಳೆಯಲಾರದು; ಕುಟುಂಬದ ಅವ್ಯಾಹತ ಪ್ರವಾಹಕ್ಕೆ ವಿವಾಹವೇ ಮೂಲ ಕಾರಣ, ಮೂಲಾಧಾರ. ವಿವಾಹದ ವಿಧಿಗಳಲ್ಲಿ, ಪದ್ಧತಿಗಳಲ್ಲಿ ವೈವಿಧ್ಯವಿದ್ದರೂ ಅದರ ಆಶಯಗಳಲ್ಲಿ ಮತ್ತು ಇಂಗಿತಗಳಲ್ಲಿ ಏಕತಾನವಿದೆ. ವಿಶ್ವದ ಎಲ್ಲ ಧರ್ಮಗಳೂ ವಿವಾಹ ಸಂಬಂಧವನ್ನು ಸುಭದ್ರಗೊಳಿಸುವ ಕಾತರತೆಯನ್ನು ಕಾಣಿಸುತ್ತವೆ. ವ್ಯಕ್ತಿಗಳಲ್ಲಿ ಔಚಿತ್ಯ ದೃಷ್ಟಿಯನ್ನು ಮೂಡಿಸಲು ಯತ್ನಿಸುತ್ತವೆ. ಪ್ರತಿಯೊಂದು ಜನಾಂಗದ ಮನೋಧರ್ಮವನ್ನು ಅನುಸರಿಸಿ, ಆಯಾ ಸಂಸ್ಕೃತಿಯ ನೆಲೆಯನ್ನು ಅವಲಂಬಿಸಿ ವೈವಾಹಿಕ ಪದ್ಧತಿಗಳು ಮೂಡಿಬರುತ್ತವೆ. ಮೂಲಭೂತವಾದ ಅಗತ್ಯಗಳ ಬಗ್ಗೆ ವೈವಿಧ್ಯವಿರದು, ಅಸ್ಪಷ್ಟತೆಯಿರದು.

ಜಗತ್ತಿನ ಜನರಲ್ಲಿ ಮದುವೆಯ ಸಂಪ್ರದಾಯಗಳು ತುಂಬ ಸ್ವಾರಸ್ಯವಾಗಿರುವುದುಂಟು. ನಮ್ಮ ದೇಶದಲ್ಲೇ ಆದಿವಾಸಿ ಜನಾಂಗಗಳಲ್ಲಿ ಸೋಜಿಗದ ಸಂಪ್ರದಾಯಗಳಿವೆ. ಅದ್ಭುತವೆನಿಸುವ ವಿವರಗಳೂ ಇವೆ. ಸಂಸ್ಕೃತಿಯ ವ್ಯಾಪಕತ್ವದಿಂದಾಗಿ ದೇಶದಲ್ಲೆಲ್ಲ ಹೆಚ್ಚು ಕಡಿಮೆ ಒಂದೇ ಬಗೆಯ ಮುಖ್ಯವಾದ

ಸಂಪ್ರದಾಯಗಳು ಮೂಡಿಬಂದಿದ್ದರೂ ಗೌಣವಾದ ಪದ್ಧತಿಗಳಲ್ಲಿ ವಿಪುಲವಾದ ಮತ್ತು ಸ್ವಾರಸ್ಯಕರವಾದ ವೈವಿಧ್ಯಗಳಿವೆ. ದೇಶಾಚಾರ. ಕುಲಾಚಾರ. ವರ್ಣವ್ಯವಸ್ಥೆ. ವೃತ್ತಿ ವೈವಿಧ್ಯ ಇವೆಲ್ಲವೂ ಮದುವೆಯ ಪದ್ಧತಿಗಳಲ್ಲಿ ಸೇರಿ ಬರುತ್ತವೆ. ಸರ್ವ ಸಾಧಾರಣವಾದ ಒಂದೇ ವಿವರವೆಂದರೆ ವಿವಾಹದ ಧಾರ್ಮಿಕ ಸ್ವರೂಪ. ಇದರಿಂದಾಗಿ ಮದುವೆಯ ಪದ್ಧತಿಗಳಲ್ಲಿ ಸಂಕೇತ ಪ್ರಮುಖವಾಗಿ ಇರುತ್ತವೆ.

## ವಿವಿಧ ಪದ್ಧತಿ

ನಮ್ಮ ದೇಶದಲ್ಲಿ ಹಿಂದೆ ಹಲವಾರು ಬಗೆಯ ವಿವಾಹಗಳು ಪ್ರಚುರವಾಗಿದ್ದುವು. ಮಾನವ ಧರ್ಮಶಾಸ್ತ್ರದಲ್ಲಿ ಹೇಳಿರುವ ಎಂಟು ಬಗೆಯ ಮದುವೆಗಳು ಇವುಗಳಲ್ಲಿ ಪ್ರಸಿದ್ಧವಾದುವಷ್ಟೆ. ಈ ಎಂಟನ್ನು ಆರ್ಯರು ಒಪ್ಪಿದ್ದರು: ಆದರೆ ಬಳಕೆಯಲ್ಲಿದ್ದ ಬಗೆಗಳು ಎಷ್ಟೋ! ದ್ರಾವಿಡರಲ್ಲಿ. ಅಂಬಷ್ಠರಲ್ಲಿ. ವಾಹಿಷ್ಯರಲ್ಲಿ, ಕಿರಾತರಲ್ಲಿ. ಪಹ್ಲವರಲ್ಲಿ. ಪೌಂಡ್ರಕರಲ್ಲಿ. ಶಕ ಜನರಲ್ಲಿ ಬಗೆ ಬಗೆಯ ಪದ್ಧತಿಗಳಿದ್ದುವು. ಧರ್ಮಶಾಸ್ತ್ರಕಾರರು ಹೇಳುವ ಎಂಟೂ ಸ್ವಾರಸ್ಯವಾದುವೇ. ಹುಡುಗಿಯ ತಂದೆತಾಯಿಯರು ವರನನ್ನು ಹುಡುಕಿ, ಅವನನ್ನು ಕರೆತಂದು ಸಾಲಂಕೃತ ಕನ್ಯಾದಾನ ಮಾಡಿ ಕೃತಾರ್ಥರಾಗುವುದು ಬ್ರಾಹ್ಮ ವಿವಾಹದ ಮುಖ್ಯಲಕ್ಷಣ. ಇದು ತುಂಬ ಪ್ರಾಚೀನವಾದ ಆರ್ಯ ಪದ್ಧತಿ: ವೈದಿಕ ಯುಗದಲ್ಲಿ ಕೂಡ ಇದು ಬಳಕೆಯಲ್ಲಿದ್ದಿತು. ಇಂದಿಗೂ ಸುಸಂಸ್ಕೃತ ಜನಾಂಗಗಳಲ್ಲಿ ದೇಶಾದ್ಯಂತವೂ ಇದೇ ಪದ್ಧತಿ ಬಳಕೆಯಲ್ಲಿದೆ. ಸಂಸ್ಕೃತಿಯ ದೃಷ್ಟಿಯಿಂದ ಅಷ್ಟು ಸಂಪನ್ನರಲ್ಲದ ಜನರ ನಡುವೆ ಇರುವ ಸಂಪ್ರದಾಯವು ಅಸುರವೆನಿಸಿಕೊಳ್ಳುತ್ತಿದೆ. ಇಲ್ಲಿ ಹುಡುಗಿಯ ಕಡೆಯವರು ಹುಡುಗನಿಂದ ಅಥವಾ ಅವನ ನೆಂಟರಿಂದ

ಶುಲ್ಕವನ್ನು ಸ್ವೀಕರಿಸಿದ ನಂತರ ಮದುವೆಯ ನಿಶ್ಚಯ ಮಾಡು ತ್ತಾರೆ. ಎರಡೂ ಕಡೆಯವರು ಕಲೆತು ಈ ಶುಲ್ಕವನ್ನು ಸಮರ್ಪಕ ವಾದಷ್ಟು ನಿರ್ಧರಿಸುತ್ತಾರೆ. ಈ ಪದ್ಧತಿಯೂ ಇಂದಿಗೆ ನಮ್ಮ ದೇಶದಲ್ಲಿ ಹಲವಾರು ಜನಾಂಗಗಳಲ್ಲಿ. ಆದಿವಾಸಿಗಳಲ್ಲಿ ರೂಢಿ ಯಲ್ಲಿದೆ.

ಮನು ಹೇಳುವ ಉಳಿದ ಆರು ಇಂದು ಬಹುಮಟ್ಟಿಗೆ ಮರೆಯಾಗಿವೆ. ಹುಡುಗಿಯ ತಂದೆ ಯಜ್ಞವನ್ನು ಮಾಡಿ, ಆ ಯಜ್ಞವನ್ನು ನಡೆಸಿಕೊಟ್ಟ ಪುರೋಹಿತನಿಗೆ ದಕ್ಷಿಣೆಯ ಬದಲು ಹುಡುಗಿಯನ್ನೇ ಸಿಂಗರಿಸಿ ದಾನ ಮಾಡುವುದು ದೈವ ವಿವಾಹ. ಹುಡುಗಿಯ ತಂದೆಗೆ ವರನು ಹಣವನ್ನು (ಅಥವಾ ಒಂದೆರಡು ಹಸುಗಳನ್ನು) ಕೊಟ್ಟು ಹುಡುಗಿಯನ್ನು ಪಡೆಯುವುದು ಆರ್ಷ ಪದ್ಧತಿ: ಇಲ್ಲಿ ನಡೆಯುವುದು ಕನ್ಯಾ ವಿಕ್ರಯ. ಇದೂ ಆದಿವಾಸಿ ಗಳಲ್ಲಿ ಇಂದಿಗೂ ಅಲ್ಲಲ್ಲಿ ಬಳಕೆಯಲ್ಲಿದೆ. ಮೇಲೆ ಹೇಳಿದ ನಾಲ್ಕೂ ಪದ್ಧತಿಗಳಲ್ಲಿ ಸಂಸ್ಕಾರಗಳುಂಟು, ವಿಧಿವತ್ತಾದ ಧಾರ್ಮಿಕ ಪ್ರಕ್ರಿಯೆಗಳುಂಟು. ವೈದಿಕ ಮಂತ್ರಗಳ ಪ್ರಯೋಗ ಉಂಟು. ಆದರೆ ಉಳಿದ ನಾಲ್ಕು ಬಗೆಗಳಲ್ಲಿ ಈ ವಿಧವಾದ ನಿಯಂತ್ರಣ ಅಷ್ಟಾಗಿ ಇರದು; ಇಲ್ಲಿ ಸ್ವಚ್ಛಂದ ವ್ಯವಹಾರಕ್ಕೆ ಅವಕಾಶ ಹೆಚ್ಚು ಎಂದರೂ ರೂಢಿಯ ಬಲ ಇದ್ದೇ ಇರುತ್ತದೆ. 'ಆಚಾರಃ ಪರಮೋ ಧರ್ಮಃ' ಎಂಬ ಸೂತ್ರವನ್ನು ಸಂಘ ಜೀವನದ ಅಡಿಗಲ್ಲೆಂದು ನಂಬಿದ್ದ ಶಾಸ್ತ್ರಕಾರರು ಈ ನಾಲ್ಕನ್ನೂ ವಿಹಿತ ಪ್ರಕಾರಗಳೆಂದೇ ಗ್ರಹಿಸಿದ್ದರು.

ಯಾವ ಸಂಸ್ಕಾರವನ್ನೂ ನಡೆಸದೆ, ವಿಧ್ಯುಕ್ತ ಕರ್ಮಗಳನ್ನು ಮಾಡದೆ ಹುಡುಗಿಯನ್ನು ಆಕೆ ಒಪ್ಪಿದ ವರನಿಗೆ ಕೊಟ್ಟು ಚೆನ್ನಾಗಿ ಬಾಳಿರೆಂದು ಹರಸಿ ಕಳುಹಿಸುವುದು ಪ್ರಾಜಾಪಾತ್ಯ ವಿವಾಹ

ಪದ್ಧತಿ. ಸಂಸ್ಕಾರವಿಲ್ಲವೆಂದ ಮಾತ್ರಕ್ಕೆ ಈ ವಿವಾಹಬಂಧನವು ಅಸ್ಪಷ್ಟವೆನ್ನಲಾಗದು; ವೈವಾಹಿಕ ಜೀವನದ ವಿಧಿನಿಷೇಧಗಳನ್ನು ವಧೂವರರಿಗೆ ಮನದಟ್ಟು ಮಾಡಿಸುವುದು ಹುಡುಗಿಯ ತಂದೆಯ ಕರ್ತವ್ಯವಾಗಿದ್ದಿತು. ಈ ವಿವಾಹದ ವಿಚ್ಛೇದವೂ ಸುಲಭವಾಗಿರಲಿಲ್ಲ. ಮೇಲಿನ ಐದೂ ಪದ್ಧತಿಗಳಲ್ಲಿ 'ವರಣ' (ಎಂದರೆ ವರನನ್ನು ಆರಿಸುವುದು) ಮುಖ್ಯ ವಿವರ; ವಿವಾಹಕ್ಕೆ ಇದೇ ಪೂರ್ವಭಾವಿಯಾದದ್ದು, ಅಗತ್ಯವಾದದ್ದು ಎಂಬ ಕಲ್ಪನೆ ಸ್ಪಷ್ಟವಾಗುತ್ತದೆ.

**ಗಾಂಧರ್ವ**

ಗಾಂಧರ್ವ ವಿವಾಹ ಸ್ವಾರಸ್ಯವಾದುದು. ಇದೂ ತುಂಬ ಪ್ರಾಚೀನವಾದ ಪದ್ಧತಿ. ಹುಡುಗಿ ಮತ್ತು ಹುಡುಗ ಇಬ್ಬರೂ ಅನುರಾಗದಲ್ಲಿ ಕಲೆತು, ಒಟ್ಟಿಗೆ ಬಾಳಲು ನಿರ್ಧರಿಸಿ, ತಂದೆ ತಾಯಿಯರಿಂದ ಅಡ್ಡಿ ಬಂದೀತೆಂದು ಬಗೆದಾಗ, ಅವರಿಬ್ಬರೂ ಕೆಲವು ನೆಚ್ಚಿನ ಸ್ನೇಹಿತರೊಂದಿಗೆ ಊರ ಹೊರಗಿನ ವನದಲ್ಲೋ, ಉದ್ಯಾನದಲ್ಲೋ ಸೇರಿ, ಶ್ರೋತ್ರಿಯನಾದವನೊಬ್ಬನ ಮನೆಯಿಂದ ಅಗ್ನಿಯನ್ನು ತಂದು, ಸ್ಮೃತಿಯು ಹೇಳುವ ವಿಧಿಗಳನ್ನು ನಡೆಸಿ, ಅಗ್ನಿಯ ಸುತ್ತ ಮೂರು ಬಾರಿ ವಧೂವರರು ಕೈ ಹಿಡಿದು ನಡೆದು ಗಂಡಹೆಂಡಿರಾಗುವುದು ಗಾಂಧರ್ವ ಪದ್ಧತಿ. ಇದು ಗುಪ್ತವಾಗಿ ನಡೆದ ವಿವಾಹವಾದರೂ ಅಗ್ನಿಸಾಕ್ಷಿಯಾಗಿ ನಡೆದದ್ದರಿಂದ ವಿಹಿತವೇ, ಅನುಲ್ಲಂಘ್ಯವೇ ಎಂಬುದು ಆಚಾರ್ಯರ ಸಮಯ. ಇವಾದನಂತರ ಹುಡುಗಿಯ ಕಡೆಯವರಿಗೆ ಸುದ್ದಿ ಮುಟ್ಟಿಸುವ ಭಾರ ಹುಡುಗನದು. ಗುಪ್ತವಾಗಿ ಒದಗಿದ ಸಂಬಂಧವನ್ನು ಬಹಿರಂಗವಾಗಿ, ವಿಧ್ಯುಕ್ತವಾಗಿ ವಿವಾಹದಿಂದ ಸಿದ್ಧ ಮಾಡುವ ಹೊಣೆ ಹುಡುಗಿಯ ಕಡೆಯವರದ್ದು. ಅವರು ಇದನ್ನು ನಿಲ್ಲಿಸುವ ಹಾಗೂ ಇಲ್ಲ. ಆದ ಕೆಲಸಕ್ಕೆ ಅನುಮೋದನೆ ನೀಡುವ ಔಚಿತ್ಯ

ಅವರಿಗಿರಬೇಕಷ್ಟೆ; ಇಲ್ಲವಾದರೆ ಧರ್ಮಶಾಸ್ತ್ರಕಾರರು ರಾಜ ದಂಡನೆಯನ್ನೂ ವಿಧಿಸಿದ್ದಾರೆ.

### ರಾಕ್ಷಸ ವಿವಾಹ

ವೀರರು ನೆರೆ ಊರುಗಳ ಮೇಲೆ ದಾಳಿ ಮಾಡಿ ಅಲ್ಲಿನ ಮದುವೆಯಾಗದ ಹುಡುಗಿಯರನ್ನು ಎತ್ತಿಕೊಂಡು ಬರುವುದು ಹಳೆಯ ಪದ್ಧತಿ; ಜಗತ್ತಿನ ಎಲ್ಲ ಜನಾಂಗಗಳಲ್ಲೂ ಇದ್ದದ್ದೇ. ಯುದ್ಧದಂಥ ವಿಷಮ ಸಂದರ್ಭಗಳಲ್ಲಂತೂ ಇದೊಂದು ನಿಯಮ ದಂತೆಯೇ. ಹುಡುಗಿಯರನ್ನು ಬಲಾತ್ಕಾರದಿಂದ ಅಪಹರಿಸಿ ಕೊಂಡು ಹೋಗುವಾಗ ಅವರ ಕಡೆಯವರಿಗೆ ಹೆಚ್ಚಿನ ಉಪದ್ರವ ಕೊಡುವುದೂ ಬಳಕೆಯಲ್ಲಿದ್ದ ವಿವರವೇ. ಹೀಗೆ ಗಟ್ಟಿ ಗುಂಡಿಗೆ ಯುವನೊಬ್ಬನು ಹುಡುಗಿಯನ್ನು ಬಲವಂತವಾಗಿ ವಶ ಮಾಡಿ ಕೊಂಡ ಮೇಲೆ ಅವಳನ್ನು ಅವನ ಹೆಂಡತಿಯೆಂದೇ ಪರಿಗಣಿಸು ವುದು ಉಚಿತ, ಅನಿವಾರ್ಯವೆಂದು ಹಳೆಯ ಕಾಲದ ಹಿರಿಯರ ಎಣಿಕೆಯಾಗಿದ್ದಿತು. ಇಂಥ ವ್ಯವಸ್ಥೆಯನ್ನು ರಾಕ್ಷಸ ವಿವಾಹ ಎಂದು ಕರೆದಿದ್ದಾರೆ. ಹುಡುಗಿ ಮಲಗಿ ನಿದ್ದೆ ಮಾಡುತ್ತಿದ್ದಾಗ, ಅಥವಾ ಬಂಧಿತಳಾಗಿ ನಿಶ್ಚೇಷ್ಟಳಾಗಿದ್ದಾಗ ಅವಳನ್ನು ಅತ್ಯಾಚಾರದಿಂದ ಸಂಭೋಗಿಸಿದ ಪುರುಷನೇ ಅವಳ ಗಂಡನೆಂದು ನಿರ್ಧರಿಸಿದ ಪದ್ಧತಿ ಪೈಶಾಚವೆನಿಸಿಕೊಂಡಿತು. ಈ ರಾಕ್ಷಸ–ಪೈಶಾಚ ಪದ್ಧತಿ ಗಳಲ್ಲಿ ವರಣದ ಪ್ರಸಂಗವೇ ಇಲ್ಲ. ಕ್ಷಾತ್ರ ಭೂಯಿಷ್ಠವಾದ ಜನಾಂಗಗಳಲ್ಲಿ ಈ ಕ್ರೂರ ಪದ್ಧತಿಗಳನ್ನು ವಿವಾಹದ ಬಗೆ ಗಳೆಂದು ಅಂಗೀಕರಿಸಿಕೊಳ್ಳದೆ ವಿಧಿಯಿರಲಿಲ್ಲ. ಪ್ರಾಚೀನ ನ್ಯಾಯದ ದೃಷ್ಟಿಯಿಂದ, ಸಮಾಜದ ಆಡಳಿತದ ದೃಷ್ಟಿಯಿಂದ ಇವನ್ನು ವಿವಾಹಗಳೆಂದು ಪರಿಗಣಿಸಿದರೂ ಮಾನಸಿಕ, ಸಾಂಸ್ಕೃತಿಕ

ಪ್ರವೃತ್ತಿಗಳ ದೃಷ್ಟಿಯಿಂದ ಇವು ವಿವಾಹಗಳಲ್ಲ. ಸಂಸ್ಕೃತಿ ಬೆಳೆದಂತೆ ಈ ಪದ್ಧತಿಗಳು ನಷ್ಟವಾಗಿವೆ.

## ಏಕಪತ್ನಿ-ಬಹುಪತ್ನಿತ್ವ

ವಿವಾಹದ ವಿಧಾನದಲ್ಲಿ ಒದಗಿಬಂದ ವೈವಿಧ್ಯದಿಂದ ಈ ಎಂಟು ಬಗೆಗಳನ್ನು ಹೇಳಿದ್ದಾರೆ. ವಿವಾಹದಲ್ಲಿ ಪಾಲುಗೊಳ್ಳುವ ವಧೂವರರ ಸಂಖ್ಯೆಯೂ ಮತ್ತಷ್ಟು ಬಗೆಗಳನ್ನು ನಿರ್ಧರಿಸುತ್ತದೆ. ಒಬ್ಬ ಗಂಡ ಒಬ್ಬಳೇ ಹೆಂಡತಿ ಇವರ ಕುಟುಂಬಕ್ಕೆ ಎಡೆಮಾಡುವುದು ಏಕ ಪತ್ನೀಗಮನ (Monogamy). ಇದು ಪ್ರಾಚೀನವಾದ ಪದ್ಧತಿ; ಇಂದಿಗೆ ಜಗತ್ತಿನಲ್ಲೆಲ್ಲ ಹೆಚ್ಚು ಬಳಕೆಯಲ್ಲಿರುವ ಪದ್ಧತಿಯೂ ಇದೇ. ಒಬ್ಬ ಗಂಡನಿಗೆ ಹಲವಾರು ಹೆಂಗಳೆಯರು ವಿವಾಹದಲ್ಲಿ ಬದ್ಧರಾಗಿರುವುದು ಬಹುಪತ್ನೀಗಮನ (Polygamy). ಹಲವಾರು ಅಪ್ರಬುದ್ಧ ಜನಾಂಗಗಳಲ್ಲಿ ಇದು ಇಂದಿಗೂ ಬಳಕೆಯಲ್ಲಿದೆ. ಪೌರ್ವಾತ್ಯ ದೇಶಗಳಲ್ಲಿ ಒಂದು ಕಾಲಕ್ಕೆ ಇದು ತುಂಬ ಪ್ರಚಲಿತವಾಗಿದ್ದಿತು. ಬಂಗಾಳದ ಕಡೆ ಕುಲೀನ ಸಂಪ್ರದಾಯ ಪ್ರಬಲವಾಗಿದ್ದಾಗ ಒಬ್ಬನಿಗೆ ಐವತ್ತು. ಅರವತ್ತು ಮಂದಿ ಹೆಂಡತಿಯರು ಇರುತ್ತಿದ್ದರು. ಕನ್ಯಾಸೆರೆಯನ್ನು ಬಿಡಿಸಲೆಂದು ಮದುವೆಯಾದನಂತರ ಈ ಹೆಂಡಂದಿರಲ್ಲಿ ಬಹು ಮಂದಿ ತಮ್ಮ ತೌರು ಮನೆಯಲ್ಲೇ ಇರುತ್ತಿದ್ದರು: ಕುಲೀನನು ಒಬ್ಬೊಬ್ಬರ ಮನೆಯಲ್ಲಿ ಸ್ವಲ್ಪಕಾಲ ಉಳಿಯುವ ಪದ್ಧತಿಯೂ ಇದ್ದಿತು. ರಾಜಾರಾಮ ಮೋಹನರಾಯ ಮುಂತಾದವರ ನಾಯಕತ್ವದಲ್ಲಿ ಈ ಸಂಪ್ರದಾಯದ ವಿನಾಶವಾಯಿತು. ಮುಸ್ಲಿಂ ಜನಾಂಗಗಳಲ್ಲಿ ಅನೇಕ ಪತ್ನೀಗಮನವು ಅವರ ಧರ್ಮ ಶಾಸ್ತ್ರಗಳಿಂದಲೇ ಅಂಗೀಕೃತವಾದ ಪದ್ಧತಿ. ಈ ದೇಶಗಳಲ್ಲಿ ಇಂದಿಗೂ ಇದು ಪ್ರಚುರ

ವಾಗಿದೆ. ಒಬ್ಬಳೇ ಹೆಂಡತಿಗೆ ಹಲವಾರು ಗಂಡಂದಿರಿರುವ ವಿಚಿತ್ರ ಪದ್ಧತಿಯೂ ವಿಶ್ವದ ಹಲವು ದೇಶಗಳಲ್ಲಿ ಬಳಕೆಯಲ್ಲಿದ್ದಿತು. ಈ ಅನೇಕಪತಿ ಪದ್ಧತಿಯು (Polyandry) ನಮ್ಮ ದೇಶದಲ್ಲಿ ಮಲಬಾರಿನ ನಾಯರ್ ಜನರಲ್ಲಿಯೂ, ಟಿಬೆಟ್ ದೇಶದಲ್ಲಿಯೂ ಡೆಹ್ರಾಡೂನಿನ ಜಉನ್‌ಸಾರ್ – ಬವಾರ್ ಜನರಲ್ಲಿಯೂ ವಿಶೇಷ ವಾಗಿ ಪ್ರಚಲಿತವಾಗಿದ್ದಿತು. ಇದರ ಅಂಗವಾಗಿ ಸೋದರರೆಲ್ಲರೂ ಒಬ್ಬಳೇ ಹೆಂಡತಿಯನ್ನು ಪಡೆಯುವ ವಾಡಿಕೆಯೂ ಇದ್ದಿತು.

ಪ್ರಾಚ್ಯ ದೇಶಗಳಲ್ಲಿ ಮದುವೆಯಾಗುವ ಮುಖ್ಯ ಉದ್ದೇಶ ಮಕ್ಕಳನ್ನು ಪಡೆಯುವುದು; ಅದೂ ಗಂಡುಮಕ್ಕಳೆಂದರೆ ತುಂಬ ಬಯಕೆ. ನಮ್ಮ ದೇಶದಲ್ಲಿ ಋಣತ್ರಯಗಳ ಕಲ್ಪನೆಯಿದೆ ಯಷ್ಟೆ. ಬ್ರಹ್ಮಚರ್ಯದಿಂದ ಋಷಿ ಋಣವನ್ನೂ, ಯಜ್ಞ ಯಾಗಾದಿ ವಿಧ್ಯುಕ್ತ ಕರ್ಮಗಳಿಂದ ದೇವಋಣವನ್ನೂ, ಮದುವೆ ಯಾಗಿ ಮಕ್ಕಳನ್ನು ಪಡೆಯುವುದರಿಂದ ಪಿತೃಋಣವನ್ನೂ (ಪ್ರಜಯಾ ಪಿತೃಭ್ಯಃ) ತೀರಿಸಬೇಕೆಂದು ತೈತ್ತರೀಯ ಸಂಹಿತೆ ಹೇಳುತ್ತದೆ. ತೈತ್ತರೀಯ ಉಪನಿಷತ್ತಿನಲ್ಲಿ ಹೇಳಿರುವ ಪ್ರಜಾ ತಂತುವನ್ನು ಮುರಿಯಬಾರದೆಂಬ ಆದೇಶದ ಉಲ್ಲೇಖ ಆಗಲೇ ಬಂದಿದೆ.

## ಅಪುತ್ರಸ್ಯ ಗತಿರ್ನಾಸ್ತಿ

'ಅಪುತ್ರಸ್ಯ ಗತಿರ್ನಾಸ್ತಿ' ಎನ್ನುವ ನಾಣ್ನುಡಿ ಪ್ರಚಲಿತವಾಗಿ ಪ್ರಸಿದ್ಧವಾಗಿದೆ. ಇದು ವಿವಾಹದ ಪ್ರಮುಖ ಆಶಯವಾದರೂ ಗಾರ್ಹಸ್ಥ್ಯ ಜೀವನವು ಸುಖವನ್ನು ಅನುಭವಿಸುವ ಆಶ್ರಮವೆಂದೇ ವ್ಯವಹಾರ. ಧರ್ಮ, ಅರ್ಥ, ಕಾಮಗಳೆಂಬ ತ್ರಿವರ್ಗ ಪುರುಷಾರ್ಥ ಗಳಿಗೂ ಗಾರ್ಹಸ್ಥ್ಯವೇ ಆಧಾರ. ಆಪಸ್ತಂಬ ಧರ್ಮಸೂತ್ರವು

"ಧರ್ಮಕ್ಕೆ ಭಂಗ ಬಾರದಂತೆ ಭೋಗಗಳನ್ನು ಅನುಭೋಗಿಸಬೇಕು; ಹೀಗೆ ಮಾಡಿದರೆ ಎರಡೂ ಲೋಕಗಳು (ಇಹ – ಪರ) ವಶವಾಗುತ್ತವೆ" ಎಂದು ನಿರೂಪಿಸಿದೆ. ಕೌಟಿಲ್ಯನು ತನ್ನ ಅರ್ಥಶಾಸ್ತ್ರದಲ್ಲಿ ಸ್ಪಷ್ಟವಾಗಿ, 'ಮನುಷ್ಯನು ಸುಖವಿಲ್ಲದೆ ಇರಬಾರದು' (ನ ನಿಃ ಸುಖಃ ಸ್ಯಾತ್) ಎಂದು ಘೋಷಿಸಿದ್ದಾನೆ. ಆಶ್ರಮ ವ್ಯವಸ್ಥೆಯಲ್ಲಿ ಬ್ರಹ್ಮಚರ್ಯವು ಗಾರ್ಹಸ್ಥ್ಯಕ್ಕೆ ಸಿದ್ಧತೆಯೆಂದೂ, ವಾನಪ್ರಸ್ಥ – ಸನ್ಯಾಸಗಳು ಆಶ್ರಮವನ್ನು ಅತಿಕ್ರಮಿಸುವ ಸಂವಿಧಾನಗಳೆಂದೂ, ಮೂರೂ ಆಶ್ರಮಗಳಿಗೆ ಆಧಾರಭೂತವಾಗಿರುವ ಗೃಹಸ್ಥಾಶ್ರಮವೊಂದೇ ಆಶ್ರಮವೆಂದೂ ಹೇಳುತ್ತಾರೆ. ಈ ಆಶ್ರಮವು ವಿವಾಹವನ್ನೇ ಅವಲಂಬಿಸಿದೆ. ಧರ್ಮದ ನೆಲೆಯಲ್ಲಿ ವಿವಾಹಕ್ಕೆ ಈ ಪ್ರಾಶಸ್ತ್ಯವಿದೆ. ಇವರ ಸುತ್ತ ಉಳಿದ ಪ್ರಯೋಜನಗಳನ್ನು ಮೂಡಿಸಿದ್ದಾರೆ.

ಅವಿವಾಹಿತನಿಗೆ ಸಮಾಜದಲ್ಲಿ ಸನ್ಮಾನ್ಯವಾದ ಸ್ಥಾನವಿಲ್ಲ. ಹಿಂದಿನ ಕಾಲದಲ್ಲಿ ಅವನನ್ನು ಹೀನಾಯವಾಗಿ ಕಾಣುತ್ತಿದ್ದುದೂ ಉಂಟು. ಗೃಹಸ್ಥಾಶ್ರಮಿಯಾದವನೂ ಹೆಂಡತಿಯ ಅನುಮೋದನೆಯಿಲ್ಲದೆ ಕೊಟ್ಟ ದಾನವು ಗ್ರಾಹ್ಯವಲ್ಲ; ಆಕೆಯಿಲ್ಲದೆ ಅವನು ಯಾವ ಶುಭ ಕಾರ್ಯದಲ್ಲಿಯೂ ಭಾಗವಹಿಸುವಂತಿಲ್ಲ. ಸ್ಮೃತಿಗಳು ಗಂಡಸನ್ನು ಅರ್ಧವೆಂದೇ ಪರಿಗಣಿಸುತ್ತವೆ; ಮದುವೆಯಾದ ಮೇಲೆ ಹೆಂಡತಿಯನ್ನು ಕೂಡಿಕೊಂಡೇ ಅವನು ಪೂರ್ಣನಾಗುವುದು. ಹೀಗೆ ವಿವಾಹವು ಅತ್ಯಗತ್ಯವಾದ ಸಂಸ್ಕಾರ.

## 3. ವಿವಾಹಪದ್ಧತಿಯ ವೈವಿಧ್ಯ

ವಿವಾಹದ ವಿಧಿಗಳು ಸಂದರ್ಭ, ಸಂಪ್ರದಾಯಗಳನ್ನು ಅವಲಂಬಿಸಿಯೇ ಮೈದಳೆಯುತ್ತವೆಯಷ್ಟೆ. ನಮ್ಮ ದೇಶದಲ್ಲಿ ಬಳಕೆಯಲ್ಲಿದ್ದ, ಇರುವ ವಿಧಿಗಳನ್ನು ನೋಡಿದರೆ ಸೋಜಿಗ ವೆನಿಸುವಷ್ಟು ವೈವಿಧ್ಯ ವ್ಯಕ್ತವಾಗುತ್ತದೆ. ಮಹಾಭಾರತ, ರಾಮಾಯಣ ಇತಿಹಾಸ ಪುರಾಣಗಳಲ್ಲಿ ಪ್ರಸಿದ್ಧ ವ್ಯಕ್ತಿಗಳೇ ವಿಭಿನ್ನ ವಿವಾಹ ಪದ್ಧತಿಗಳಿಗೆ ನಿದರ್ಶನಗಳಾಗಿದ್ದಾರೆ. ಸೀತಾ ರಾಮರ ವಿವಾಹ ಸ್ವಯಂವರ; ನಳದಮಯಂತಿಯರ ವಿವಾಹವೂ ಸ್ವಯಂವರವೇ. ಆದರೆ ಸೀತಾರಾಮರ ಮಿಲನವಾದದ್ದು ಸ್ವಯಂ ವರದ ಸಂದರ್ಭದಲ್ಲೇ ಮೊದಲು. ಆ ಮುಂಚೆ ಅವರಿಬ್ಬರ ನಡುವೆ ಯಾವ ಪರಿಚಯವೂ ಇರಲಿಲ್ಲ. ಆದರೆ ನಳನಿಗೂ ದಮಯಂತಿಗೂ ಪರಸ್ಪರ ಪ್ರಣಯದ ಸಂಬಂಧ ಮೊದಲೇ ಇದ್ದಿತು. ಪಾಂಚಾಲ ರಾಜನ ಮಗಳಾದ ದ್ರೌಪದಿಯು ಅರ್ಜು ನನ್ನು ವರಿಸಿದ್ದು ಸ್ವಯಂವರದ ವಿಧಿಯಲ್ಲೇ. ಆದರೆ ವರಣದ ಸ್ವಾತಂತ್ರ್ಯ ಆಕೆಗೇ ಸಂಪೂರ್ಣವಾಗಿ ಇರಲಿಲ್ಲ.

ಕ್ಷತ್ರಿಯರಲ್ಲಿ ಈ ಪದ್ಧತಿ ಪ್ರಚಲಿತವಾಗಿದ್ದಿತು. ಮುಂದೆ ಅವರ ಅನ್ವಯದಲ್ಲಿ ಬಂದ ರಾಜಪುತ್ರ ಜನರೂ ಇದೇ ಪದ್ಧತಿ ಯನ್ನು ಮತ್ತೆ ಬಳಕೆಗೆ ತಂದರು. ಕನ್ಯಾಕುಬ್ಜದ ರಾಜ ಜಯಚಂದ್ರನ ಮಗಳು ಸಂಯೋಜಿತೆಯನ್ನು ಪೃಥ್ವೀರಾಜ ಚೌಹಾನನು ಅಪಹರಿಸಿಕೊಂಡು ಹೋದದ್ದು ಸ್ವಯಂವರ ಮಂಟಪ ದಿಂದಲೇ. ಇದು ಹನ್ನೆರಡನೆಯ ಶತಮಾನದ ಮಾತು. ಇಲ್ಲಿ ಪೃಥ್ವೀ ರಾಜನು ಜಯಚಂದ್ರನ ಶತ್ರುವಾಗಿದ್ದುದರಿಂದ ಸಂಯೋಜಿತೆಯ

ಸ್ವಯಂವರಣ ಸ್ವಾತಂತ್ರ್ಯ ಕುಂಠಿತವಾಗಿದ್ದಿತು. ಯಾವ ಕಾಲದ ಸ್ವಯಂವರದಲ್ಲಿಯೂ ಈ ಅಪವಾದ ಇದ್ದೇ ಇದ್ದಿತು.

**ಕನ್ಯಾಪಹರಣ**

ಕ್ಷತ್ರಿಯರಲ್ಲಿ ಬಳಕೆಯಲ್ಲಿದ್ದ ಇನ್ನೊಂದು ಪದ್ಧತಿ ರಾಕ್ಷಸ ರೀತಿಯ ವಿವಾಹ. ಬಲವಂತವಾಗಿ ಹುಡುಗಿಯ ಕಡೆಯವರ ಮೇಲೆ ಬಿದ್ದು ಅವರ ಪರಾಭವದ ನಡುವೆ ಹುಡುಗಿಯನ್ನು ಅಪಹರಿಸಿಕೊಂಡು ಹೋಗುವ ಸಂಪ್ರದಾಯ ಅನಾರ್ಯವೆನಿಸಿ ದರೂ ಬಲಪ್ರಮುಖವಾದ ಸಮಾಜದಲ್ಲಿ ಇದು ಸನ್ಮಾನ್ಯವಾಗಿ ದ್ದಿತು. ಕೃಷ್ಣನ ತಂಗಿ ಸುಭದ್ರೆಯನ್ನು ಅರ್ಜುನನು ಕೈ ಹಿಡಿದದ್ದು ಈ ಪದ್ಧತಿಯಿಂದಲೇ. ವರನ ಪರವಾಗಿ ಅವನ ಹಿರಿಯರು ಬಲ ಪ್ರಯೋಗ ಮಾಡುತ್ತಿದ್ದುದೂ ಉಂಟು. ಕೃಷ್ಣನ ತಾಯಿಯಾದ ದೇವಕಿಯನ್ನು ವಸುದೇವನಿಗೆ ತಂದುಕೊಂಡದ್ದು ಹೀಗೆಯೇ. ಭೀಷ್ಮನು ತನ್ನ ಸೋದರ ವಿಚಿತ್ರವೀರ್ಯನಿಗೆಂದೇ ಕಾಶೀರಾಜನ ಮಕ್ಕಳಾದ ಅಂಬೆ, ಅಂಬಾಲಿಕೆ, ಅಂಬಿಕೆಯರನ್ನು ಸೆರೆ ಹಿಡಿದು ತಂದನು. ಮೂರು ಮಂದಿಗೆ ಸ್ವಯಂವರವೂ ನಿಶ್ಚಯವಾಗಿದ್ದಿತು. ಸ್ವಯಂವರದ ಮಂಟಪಕ್ಕೆ ಭೀಷ್ಮನು ನುಗ್ಗಿ ಬಲಾತ್ಕಾರದಿಂದ ಅವರನ್ನು ಹಸ್ತಿನಾಪುರಕ್ಕೆ ಕರೆದೊಯ್ದನು. ಇವರಲ್ಲಿ ಹಿರಿಯ ಸೋದರಿಯಾದ ಅಂಬೆಯು ವಿಚಿತ್ರವೀರ್ಯನನ್ನು ಮದುವೆಯಾ ಗಲು ಒಪ್ಪಲಿಲ್ಲ. ಸಾಳ್ವ ರಾಜನೊಂದಿಗೆ ತನ್ನ ನಿಶ್ಚಿತಾರ್ಥವಾಗಿದ್ದು ಅವನಲ್ಲಿ ತಾನು ಅನುರಕ್ತಳೆಂದು ತಿಳಿಸಲು ಭೀಷ್ಮನು ಅವಳನ್ನು ಸಾಳ್ವ ರಾಜನ ಬಳಿಗೆ ಕಳುಹಿಸುತ್ತಾನೆ. ಆದರೆ ಬೇರೊಬ್ಬನಿಂದ ಅಪಹೃತಳಾದ ಕನ್ಯೆಯನ್ನು ವರಿಸಲು ಸಾಳ್ವ ರಾಜನು ನಿರಾ ಕರಿಸುತ್ತಾನೆ. ಆಗ ಆಕೆ ಋಷಿಗಳ ಆಶ್ರಮವೊಂದಕ್ಕೆ ತೆರಳಿ ನ್ಯಾಯ ನಿರ್ಣಯ ಬೇಡುತ್ತಾಳೆ. ಧರ್ಮಜ್ಞರಾದ ಋಷಿಗಳು

ಸಾಳ್ವ ರಾಜನ ನಿರಾಕರಣೆ ನ್ಯಾಯವಾದದ್ದೆಂದೂ, ನಿಶ್ಚಿತಾರ್ಥ ನಡೆದಿದ್ದ ಹುಡುಗಿಯನ್ನು ಅಪಹರಿಸಿಕೊಂಡು ಹೋದ ಭೀಷ್ಮನದೇ ಅಪರಾಧವೆಂದೂ ನಿರ್ಣಯಿಸುತ್ತಾರೆ. ಎಂದರೆ ರಾಕ್ಷಸರ ರೀತಿಯ ವಿವಾಹದಲ್ಲಿಯೂ ನ್ಯಾಯಾನ್ಯಾಯ ವಿವೇಕವಿದ್ದಿತು. ಮದುವೆ ಯಾದ, ಅಥವಾ ನಿಶ್ಚಿತಾರ್ಥವಾದ ಹುಡುಗಿಯನ್ನು ಹಿಡಿಯ ಬಾರದೆಂಬ ನಿಯಮವಿದ್ದಿತು.

ಆದರೆ ಯುದ್ಧದ ಸಂದರ್ಭದಲ್ಲಿ ಇಂಥ ನಿಯಮಗಳನ್ನು ವಿಜಯಿಗಳಾದವರು ಗಣನೆಗೆ ತಂದುಕೊಳ್ಳುತ್ತಿರಲಿಲ್ಲ. ಸೋತವರ ಅಥವಾ ಸತ್ತವರ ಹೆಂಡಂದಿರನ್ನೂ ಹೆಣ್ಣು ಮಕ್ಕಳನ್ನೂ ಸಮರ ಪಾರಿತೋಷಕವೆಂದು ಕೊಂಡೊಯ್ಯುವ ಪದ್ಧತಿ ನಮ್ಮ ದೇಶದಲ್ಲಿ ಮಾತ್ರವಲ್ಲ, ಎಲ್ಲ ದೇಶಗಳಲ್ಲಿಯೂ ಬಳಕೆಯಲ್ಲಿದ್ದಿತು. ಆದರೆ ಇದರ ಬಳಕೆ ಮಧ್ಯಯುಗದಿಂದಾಚೆ. ನಮ್ಮ ದೇಶದಲ್ಲಿ ಅಷ್ಟಾಗಿ ಇರಲಿಲ್ಲ. ಕೃಷ್ಣನ ಹದಿನಾರು ಸಾವಿರ ಮಡದಿಯರು ಹೀಗೆ ವಿಜಯ ಸ್ಮಾರಕಗಳಾದವರೇ.

ಗಾಂಧರ್ವ ವಿವಾಹದ ಪ್ರಸ್ತಾಪ ಹಿಂದೆಯೇ ಬಂದಿದೆ. ಇಂಥ ಕೂಡಿಕೆಗಳು ಸ್ಥಿರವಾಗಿರಬೇಕೆಂಬ ನಿಯಮ ಬಹು ವೇಳೆ ಕಾಣ ಬರುವುದಿಲ್ಲ. ಅವುಗಳಿಗೆ ಸಂದರ್ಭ ಶುದ್ಧಿಯಷ್ಟೇ ಪ್ರಮಾಣ ವೆಂದರೂ ತಪ್ಪಿಲ್ಲ. ಪ್ರೀತಿಯೇ ಪ್ರಮುಖವಾಗಿ ಅನುರಾಗವೇ ಬಂಧವಾಗಿ ಗಂಡಸೊಬ್ಬನು ಹೆಂಗಸಿನ ಕೈ ಹಿಡಿದು ಅವಳನ್ನು ಕೂಡಿಯಾಡುವಾಗ ವಿವಾಹದ ವಿಧಿಗಳು ನಡೆಯದೇ ಇರುವುದೂ ಅಪರೂಪವಾಗಿರಲಿಲ್ಲ. ಭೀಮನಿಗೂ ಹಿಡಿಂಬೆಗೂ, ಪರಾಶರನಿಗೂ ಸತ್ಯವತಿಗೂ ನಡುವೆ ನಡೆದ ಮದುವೆ ಇಂಥದು. ಕಣ್ವನ ಆಶ್ರಮದಲ್ಲಿ, ದುಷ್ಯಂತ ಶಕುಂತಲೆಯರು ಕೂಡಿದಾಗ ಗಾಂಧರ್ವ ವಿವಾಹದ ವಿಧಿಗಳು ನಡೆಯಲಿಲ್ಲ. ಇದಕ್ಕಾಗಿಯೇ ಪ್ರಣಯ

ಬಹುಳಿನಾದ ದುಷ್ಯಂತನಿಗೆ ಶಕುಂತಲೆಯ ಕೈ ಹಿಡಿದದ್ದು ತಟ್ಟನೆ ನೆನಪಿಗೆ ಬರಲಿಲ್ಲ. ಸನ್ನಿವೇಶದ ರಭಸದಿಂದ ಹೆಂಗಳೆಯನ್ನು ಕೂಡಿಕೊಂಡಿದ್ದರೂ ದುಷ್ಯಂತನು ಒಡನೆಯೇ ಅವಳನ್ನು ಅಲ್ಲಿಯೇ ಬಿಟ್ಟು ತಾನು ತನ್ನ ರಾಜಧಾನಿಗೆ ಹಿಂದಿರುಗಿದುದು ಅವನಿಗೇನು ಅನುಚಿತವೆನಿಸಲಿಲ್ಲ—ಕಣ್ವನಿಗಾಗಲೀ, ಶಕುಂತಲೆಗಾಗಲೀ ಇದು ಸೋಜಿಗವೆನಿಸಲಿಲ್ಲ. ಕೆಲವು ಗಾಂಧರ್ವ ವಿವಾಹಗಳು ಸ್ಥಿರವಾಗಿರುತ್ತಿದ್ದುದೂ ಉಂಟು. ಯಯಾತಿ–ದೇವಯಾನಿಯರ ಮದುವೆಯೊಂದು ನಿದರ್ಶನ. ಶಂತನು–ಸತ್ಯವತಿಯರ ಮದುವೆ ಇನ್ನೊಂದು.

## ವಿವಾಹ ವಿಚ್ಛಿತ್ತಿ

ಒಡಂಬಡಿಕೆಯ ಕೂಡಿಕೆಗಳು ಒಂದು ಕಾಲಕ್ಕೆ ಬಳಕೆಯಲ್ಲಿದ್ದುವು. ವೈವಾಹಿಕ ಜೀವನದಲ್ಲಿ ಅಭ್ಯರ್ಥನಾಭಂಗವಾದೊಡನೆ ವಿಚ್ಛೇದ ಒದಗಬಹುದೆಂಬ ಕಲ್ಪನೆಯೂ ಮೂಡಿದ್ದಿತು. ಇತಿಹಾಸಪ್ರಸಿದ್ಧವಾದ ನಿದರ್ಶನವೆಂದರೆ ಭೀಷ್ಮ ಹುಟ್ಟಿದ ಸಂದರ್ಭದಲ್ಲಿ ಗಂಗೆ—ಶಂತನು ಇವರ ನಡುವೆ ನಡೆದ ವಿವಾಹವಿಚ್ಛಿತ್ತಿ. ಗಂಗೆಯನ್ನು ಮೋಹಿಸಿ ಶಂತನು ಆಕೆಯ ಕೈ ಹಿಡಿದಾಗ ತಾನು ಏನು ಮಾಡಿದರೂ ಅಡ್ಡಿ ಬರಬಾರದೆಂದೂ, ಗಂಡ ಅಡ್ಡಿ ಬಂದೊಡನೆ ತಾನು ವಿವಾಹಬಂಧದಿಂದ ಮುಕ್ತಳೆಂದೂ ಆಕೆಯ ನಿರ್ಬಂಧ ಇದ್ದಿತು. ಮಗುವು ಹುಟ್ಟಿದೊಡನೆ ಅದನ್ನು ನೀರಿಗೆ ಎಸೆಯುವ ವಿಚಿತ್ರ ಚಾಳಿ ಆಕೆಗಿದ್ದಿತು. ಏಳು ಬಾರಿ ಇದು ನಡೆದಾಗಲೂ ಶಂತನು ಏನೂ ಹೇಳಲಿಲ್ಲ. ಅವನ ಹೃದಯ ಹರಿಯುತಾದರೂ ಮಡದಿಯನ್ನು ಉಳಿಸಿಕೊಳ್ಳುವ ಮೋಹ ಅವನನ್ನು ಹಿಡಿದಿದ್ದಿತು. ಆಕೆಯು ಎಂಟನೆಯ ಮಗುವನ್ನೂ ಹುಟ್ಟಿದೊಡನೆ ನೀರಿಗೆಸೆಯಲು ಹೊರಟಾಗ ಅವನಿಗೆ ತಡೆಯಲಾಗಲಿಲ್ಲ. ಅವಳ ಕೈ ಹಿಡಿದು

ತಡೆದನು. ಮಗುವೇನೋ ಉಳಿಯಿತು, ಆದರೆ ಗಂಗೆಯೊಂದಿಗೆ ಒದಗಿದ್ದ ಕೂಡಿಕೆ ಒಡೆಯಿತು. ಉಳಿದ ಈ ಮಗುವೇ ಮುಂದೆ ಭೀಷ್ಮನೆಂದು ಪ್ರಸಿದ್ಧನಾದ ಗಾಂಗೇಯ. ಇದಾದ ಮೇಲೆಯೇ ಶಂತನು ಸತ್ಯವತಿಯನ್ನು ವರಿಸಿದ್ದು.

ಭೀಷ್ಮನ ನಿರ್ವಹಣೆಯಲ್ಲಿಯೇ ಇದ್ದ ಪಾಂಡುರಾಜನು ಮದ್ರ ದೇಶದ ಅರಸುಮಗಳಾದ ಮಾದ್ರಿಯನ್ನು ಕೈಹಿಡಿದದ್ದು ಅಸುರ ಬಗೆಯ ಪದ್ಧತಿಯಿಂದ; ಎಂದರೆ ಮದ್ರರಾಜನಿಗೆ ಕನ್ಯಾ ಶುಲ್ಕವನ್ನು ಕೊಟ್ಟು ವಧುವನ್ನು ಕೊಂಡನು. ಈ ಪದ್ಧತಿಯು ಮದ್ರ ದೇಶದ ಜನರಲ್ಲಿ ಬಳಕೆಯಲ್ಲಿದ್ದಿತು. ಭೀಷ್ಮನಿಗೆ ಇದು ಸೋಜಿಗವೆನಿಸಿತಾದರೂ ಸಂಪ್ರದಾಯದ ಮುದ್ರೆಯನ್ನು ಶಿಥಿಲ ಗೊಳಿಸಲು ಅವನು ಬಯಸಲಿಲ್ಲ. ಮಹಾಭಾರತದ ಕಾಲ ದಲ್ಲಿ ಹೀಗೆ ನೆರೆನಾಡುಗಳಲ್ಲಿಯೇ ಹಲವಾರು ಪದ್ಧತಿಗಳು ಪ್ರವೃತ್ತವಾಗಿದ್ದುವು. ಈ ಪದ್ಧತಿಗಳು ಪ್ರಾಚೀನವೆಂಬ ಉಲ್ಲೇ ಖವೂ ಬರುತ್ತದೆ.

## ವಿಚಿತ್ರ ನಿಯಮ

ಹಲವಾರು ಸಂದರ್ಭಗಳಲ್ಲಿ ಮದುವೆಯ ಸಂದರ್ಭದಲ್ಲಿ ನೀತಿಯ ಮಾತು ಬರುವುದಿಲ್ಲ. ಋತುವಿನಲ್ಲಿರುವ ಹುಡುಗಿ ಯನ್ನು ಯಾರಾದರೂ ಆಗಲಿ ಕೂಡಿಕೊಳ್ಳಬೇಕೆಂಬುವ ಒಂದು ವಿಚಿತ್ರ ನಿಯಮವು ಮಧ್ಯಯುಗದಲ್ಲಿ ಪ್ರಚಲಿತವಾಗಿದ್ದಿತು. ಋತು ನಿರಾಕರಣೆಯು ಭ್ರೂಣ ಹತ್ಯೆಯಂತೆ ಪಾಪವೆಂಬುದು ಕಲ್ಪನೆ. ಮದುವೆಯಾದ ಹೆಂಗಸಾದರೂ ಋತುವಿ ನಲ್ಲಿದ್ದಾಗ ಗಂಡ ಹತ್ತಿರದಲ್ಲಿಲ್ಲದಿದ್ದರೆ, ಅಥವಾ ಗಂಡನು ಅವಳ ಕಾಮವನ್ನು ಪೂರೈಸಲು ಅಶಕ್ತನಾಗಿದ್ದರೆ ಆಕೆ ಪರಪುರುಷನೊಂದಿಗೆ ಕೂಡಿಕೊಳ್ಳಬಹುದೆಂದೂ, ಅದು ನೀತಿ ಬಾಹಿರವಾಗದೆಂದೂ,

ಆದರಿಂದ ಪಾತಿವ್ರತ್ಯಕ್ಕೆ ಕಳಂಕವಿಲ್ಲವೆಂದೂ ವಿಚಿತ್ರ ನಿಯಮ ವಿಧಿಸಿತು. ಈ ವಿಚಾರವಾಗಿ ಒಂದು ಸ್ವಾರಸ್ಯವಾದ ಕಥೆಯಿದೆ.

ಉತ್ತಂಕನು ಗುರುಕುಲದಲ್ಲಿದ್ದಾಗ ಒಮ್ಮೆ ಗುರುಪತ್ನಿಯು ಋತುವಿನ ಅವಧಿಯಲ್ಲಿ ಬಂದಳು. ಆಗ ಗುರು ಆಶ್ರಮದಲ್ಲಿರ ಲಿಲ್ಲ. ಆಕೆಯ ಪ್ರಕೃತಿಕಾಮನೆಯನ್ನು ಪೂರೈಸಲು ಉತ್ತಂಕ ನಿಗೆ ಕರೆ ಬಂದಿತು. ಉತ್ತಂಕನಿಗೆ ಈಗ ಸಂದಿಗ್ಧ ಪರಿಸ್ಥಿತಿ ಒದಗಿತು. ಗುರುಪತ್ನಿಯೆಂದರೆ ತಾಯಿಯ ಸಮಾನ; ಆಕೆಯನ್ನು ಎಂಥ ಪರಿಸ್ಥಿತಿಯಲ್ಲಾದರೂ ಕೂಡಿಕೊಳ್ಳುವುದು ಸ್ವಮಾತೃಗಮನ ದಂತೆ ಪಾಪ. ಋತುವಿನ ಅವಧಿಯಲ್ಲಿ ಹೆಂಗಸಿನ ಕರೆಯನ್ನು ನಿರಾಕರಿಸುವುದೂ ಪಾಪವೇ. ಎರಡೂ ಪಾಪಗಳ ಪ್ರಮಾಣ ವನ್ನು ತುಲನ ಮಾಡಿ ಗುರುಪತ್ನಿಯ ಸಂಭೋಗವೇ ಹೆಚ್ಚಿನ ಪಾಪವೆಂದು ಉತ್ತಂಕ ನಿರ್ಧರಿಸಿದನು.

## ವ್ಯಾಸ ಜನ್ಮ

ಈ ಋತುವಿನ ಗೊಂದಲದ ವಿಚಾರವಾಗಿ ಇನ್ನೊಂದು ಪ್ರಸಿದ್ಧ ಕಥೆ ಮತ್ಸ್ಯಗಂಧಿಯದು. ಮಹಾಭಾರತವನ್ನು ಬರೆದು ಅಜರಾಮರನಾಗಿರುವ ಕೃಷ್ಣ–ದ್ವೈಪಾಯನ–ವ್ಯಾಸ ಮುನಿಯು ಪರಾಶರ ಮುನಿಯ ಮಗನಷ್ಟೆ. ಈ ಪರಾಶರನು ಒಮ್ಮೆ ನದೀ ನಿರ್ಝರದಲ್ಲಿ ಹಾದು ಹೋಗುತ್ತಿರುವಾಗ ಬೆಸ್ತರ ತರುಣಿ ಯೊಬ್ಬಳು ಅರೆಬೆತ್ತಲೆಯಾಗಿ ನೀರಿನಲ್ಲಿ ವಿಹರಿಸುತ್ತಿರುವುದನ್ನು ಕಂಡು ಮುಗ್ಧನಾದನು. ತನ್ನ ಅಲೌಕಿಕ ದೃಷ್ಟಿಯಿಂದ ಈಕೆ ಆ ಸಮಯದಲ್ಲಿ ಋತುಮತಿಯಾಗಿದ್ದುದನ್ನೂ ತಿಳಿದುಕೊಂಡು ಆಕೆಯೊಂದಿಗೆ ಒಡನೆಯೇ ಕೂಡಿಕೊಳ್ಳುವ ಬಯಕೆಯನ್ನು ಸೂಚಿಸಿದನು. ಮೀನಿನ ವಾಸನೆಯಿಂದ ತುಂಬಿದ್ದ ತನ್ನ ಮೈ ಯಿಂದ ಮುನಿಯನ್ನು ಮಲಿನ ಮಾಡಲು ಆಕೆ ಹಿಂದೆಗೆದಾಗ ಅವಳ

ಮೈಯಿನ ಮತ್ಸ್ಯಗಂಧವನ್ನು ಪರಾಶರನು ಯೋಗಸಿದ್ಧಿಯಿಂದ ಸುವಾಸನೆಯನ್ನಾಗಿ ಮಾರ್ಪಡಿಸಿದನು. ಮಾಯಾತಿಮಿರದ ಅಂತರಾಳದಲ್ಲಿ ಇಬ್ಬರೂ ಕೂಡಿಕೊಂಡರು. ಈ ಕೂಡಿಕೆಯಿಂದಲೇ ವ್ಯಾಸನು ಹುಟ್ಟಿದ್ದು. ಆದರೆ ಈ ಕೂಡಿಕೆಯಾದೊಡನೆ ಪರಾಶರನು ಮತ್ಸ್ಯಗಂಧಿಯನ್ನು ಅಲ್ಲಿಯೇ ಬಿಟ್ಟು ಮುಂದೆ ನಡೆದನು. ಮತ್ಸ್ಯಗಂಧಿಯ ತಂದೆ ಲೋಕಾಪವಾದವನ್ನು ತಪ್ಪಿಸಲು ಗರ್ಭವತಿಯಾದ ಮತ್ಸ್ಯಗಂಧಿಯನ್ನು ದ್ವೀಪವೊಂದರಲ್ಲಿ ಏಕಾಂತದಲ್ಲಿ ಅಡಗಿಸಿಟ್ಟನು. ಇಲ್ಲಿಯೇ ಹುಟ್ಟಿ ಬೆಳೆದ ಮಗುವು ದ್ವೈಪಾಯನ ಎನಿಸಿಕೊಂಡಿತು.

**ಅನುಲೋಮ ಪದ್ಧತಿ**

ವರ್ಣ ವ್ಯವಸ್ಥೆಯಲ್ಲಿ ಅನುಲೋಮ ವಿವಾಹವೆಂದರೆ ಬ್ರಾಹ್ಮಣನು ಕ್ಷತ್ರಿಯ, ವೈಶ್ಯ, ಶೂದ್ರ, ಕನ್ನೆಯರನ್ನೂ ಕ್ಷತ್ರಿಯನು ವೈಶ್ಯ, ಶೂದ್ರ ಕನ್ನೆಯರನ್ನೂ ವೈಶ್ಯನು ಶೂದ್ರ ಕನ್ಯೆಯನ್ನೂ ವರಿಸಬಹುದೆಂಬ ನಿಯಮ. ಇದಕ್ಕೆ ವಿರುದ್ಧವಾಗಿ, ಕೆಳಗಿನ ವರ್ಣದ ಗಂಡಸು ಮೇಲಿನ ವರ್ಣದ ಹೆಂಗಸನ್ನು ವರಿಸುವುದು ಪ್ರತಿಲೋಮ ವಿವಾಹವೆನಿಸಿಕೊಳ್ಳುತ್ತದೆ. ಇದು ನಿಷಿದ್ಧವಾದುದೆಂದು ಧರ್ಮಶಾಸ್ತ್ರಗಳ ಮತ. ಸವರ್ಣ ವಿವಾಹದಿಂದ ಹುಟ್ಟಿದ ಮಕ್ಕಳೇ ಶ್ರೇಷ್ಠರೆಂದೂ, ಅನುಲೋಮದಿಂದ ಹುಟ್ಟಿದವರು ಅವರಿಗಿಂತ ಕೀಳೆಂದೂ, ಪ್ರತಿಲೋಮಜರಾದವರು ಪತಿತರೆಂದೂ ಕಲ್ಪನೆಯಿದ್ದಿತು. ಆಪಸ್ತಂಬ, ಗೌತಮ, ವಶಿಷ್ಟ. ಮನು ಮುಂತಾದ ಧರ್ಮಶಾಸ್ತ್ರಕಾರರು ಅನುಲೋಮವನ್ನೂ ಗ್ರಾಹ್ಯವೆಂದು ಒಪ್ಪುವುದಿಲ್ಲ. ಅವರ ದೃಷ್ಟಿಯಲ್ಲಿ ಸವರ್ಣ ವಿವಾಹವೇ ಉತ್ತಮವಾದುದು. ಅನುಲೋಮದಿಂದ ಹುಟ್ಟಿದವರು ವಿಶಿಷ್ಟ ವರ್ಣಗಳೆಂದೇ ಪರಿಗಣಿತರಾಗುತ್ತಿದ್ದರು. ಮೂರ್ಧಾವಸಿಕ್ತ, ಅಂಬಷ್ಟ,

ನಿಷಾದ. ಮಾಹಿಷ್ಯ. ಉಗ್ರ, ಕರಣ ಇವರೆಲ್ಲರೂ ಚಾತುರ್ವರ್ಣ್ಯದಲ್ಲಿ ಸೇರದೆ ಬೇರೆ ಬೇರೆಯಾಗಿಯೇ ಉಳಿದರು. ಉಳಿಯದೆ ವಿಧಿಯಿರಲಿಲ್ಲ. ಇವರನ್ನು ಒಮ್ಮೊಮ್ಮೆ ದ್ವಿಜಾತಿಯೆಂದು ವ್ಯವಹರಿಸಿ ಸಂಸ್ಕಾರಗಳನ್ನು ನಡೆಸುತ್ತಿದ್ದುದೂ ಉಂಟು. ಆದರೆ ಸಮಾಜದಲ್ಲಿ ಅವರ ಸ್ಥಾನ ಸಂದಿಗ್ಧವಾಗಿಯೇ ಇರುತ್ತಿದ್ದಿತು. ವರ್ಣದವರು ಇವರನ್ನು ಕಡೆಗಣ್ಣಿನಿಂದಲೇ ಕಾಣುತ್ತಿದ್ದರು.

ಪ್ರತಿಲೋಮವಂತೂ ವಿಗರ್ಹಿತವಾದ ಪದ್ಧತಿಯೆಂಬ ಪರಿಗಣನೆ ಇದ್ದಿತು. ಈ ಸಂಬಂಧದಿಂದ ಹುಟ್ಟಿದವರು ಕೀಳು ವರ್ಣದವರೆಂದೂ. ವರ್ಣಬಾಹಿರರೆಂದೂ ವ್ಯವಹಾರವಿದ್ದಿತು. ಆದರೆ ಇಲ್ಲಿಯೂ ವಿವಾಹದ ವಿಧಿ ಇದ್ದುದನ್ನು ನೋಡಿದರೆ ಈ ರೀತಿಯೂ ಬಳಕೆಯಲ್ಲಿ ಇದ್ದಂತೆ ತಿಳಿದುಬರುತ್ತದೆ. ಧರ್ಮಶಾಸ್ತ್ರಗಳು ಪ್ರತಿಲೋಮದಂಥ ನಿಷಿದ್ಧ ಸಂಬಂಧದಲ್ಲಿಯೂ 'ವಿವಾಹೇಷು ಸಮನ್ವಯಾತ್' ಎಂದೂ 'ಚೌರ್ಯಾತ್' ಎಂದೂ ಎರಡು ಬಗೆಗಳನ್ನು ಹೇಳುತ್ತವೆ. ನಿದರ್ಶನಕ್ಕೆ ಬ್ರಾಹ್ಮಣ ಸ್ತ್ರೀಯು ಕ್ಷತ್ರಿಯ ಪುರುಷನನ್ನು ವಿವಾಹದಲ್ಲಿ ಕೂಡಿಕೊಂಡರೆ ಅವರಿಗೆ ಹುಟ್ಟಿದ ಮಗುವಿನದು ಸೂತ ಜಾತಿ; ವಿವಾಹವಿಲ್ಲದೆ ಗುಪ್ತವಾಗಿ (ಕಳ್ಳತನದಲ್ಲಿ. ಚೌರ್ಯಾತ್) ಇವರಿಬ್ಬರೂ ಸೇರಿ ಮಗುವನ್ನು ಪಡೆದರೆ ಅದರ ಜಾತಿ ರಥಕಾರರ ಜಾತಿ. ಸೂತನಿಗಿಂತ ರಥಕಾರ ಸಮಾಜದ ವರ್ಣ ವ್ಯವಸ್ಥೆಯಲ್ಲಿ ಕೆಳಮಟ್ಟದವನು. ಇವರನ್ನು ಸಂಕೀರ್ಣ ವರ್ಣವೆಂದು ವ್ಯವಹರಿಸಿ ಇವರಿಂದ ಧರ್ಮ ಹಾನಿಯಾಗುವುದೆಂಬ ಕಲ್ಪನೆಯನ್ನು ಧರ್ಮಶಾಸ್ತ್ರ ಮೂಡಿಸಿದೆ. ಚಾಂಡಾಲ. ಪೌಲ್ಕಸ. ವೈನ ಮುಂತಾದವರು ಸಂಕೀರ್ಣ ಜಾತಿಯವರು. ಶೂದ್ರ ಪುರುಷನಲ್ಲಿ ಬ್ರಾಹ್ಮಣಿ

ಸ್ತ್ರೀಯು ಮೋಹಗೊಂಡು ಕೂಡಿಕೊಂಡರೆ ಚಾಂಡಾಲನು ಹುಟ್ಟು ತ್ತಾನೆಂದು ನಾರದ ಸ್ಮೃತಿ ಹೇಳುತ್ತದೆ.

**ವರ್ಣ ಸಂಕರ**

ವಿವಾಹವಿಲ್ಲದೆ ಕೂಡಿಕೆಯಿಂದ ಹುಟ್ಟಿದ ಮಗು 'ಕ್ಷೇತ್ರಜ' ಎನಿಸಿಕೊಳ್ಳುತ್ತದೆ. ಇಂಥ ಮಕ್ಕಳು ಸಹಜವಾಗಿ ಸಮಾಜದ ಆಗ್ರಹವನ್ನು ಎದುರಿಸಬೇಕಾಗಿದ್ದಿತು. ಮಹಾಭಾರತದ ಪ್ರಸಿದ್ಧ ಪುರುಷರಾದ ಪಾಂಡು, ಧೃತರಾಷ್ಟ್ರ, ವಿದುರ ಇವರೆಲ್ಲರೂ ಕ್ಷೇತ್ರಜರೇ; ಅವರ ವರ್ಣ ನಿರ್ದೇಶ ಅವರವರ ತಾಯಿಯರ ವರ್ಣಗಳನ್ನು ಅವಲಂಬಿಸಿದ್ದಿತು. ಯುಧಿಷ್ಠಿರನು ಮಹಾ ಭಾರತದ ವನ ಪರ್ವದಲ್ಲಿ ಹೇಳುವ ಒಂದು ಮಾತು ವಿವಾಹದ ಪದ್ಧತಿಗಳಲ್ಲಿ ಆ ಕಾಲಕ್ಕೆ ಬಳಕೆಯಲ್ಲಿದ್ದ ವೈವಿಧ್ಯವನ್ನೂ ಇದರಿಂದ ವರ್ಣ ವ್ಯವಸ್ಥೆಗೆ ಒದಗಿದ ಆತಂಕವನ್ನೂ ಸ್ಪಷ್ಟಗೊಳಿಸುತ್ತದೆ:

ಜಾತಿರತ್ರ ಮಹಾಸರ್ಪ ಮನುಷ್ಯತ್ವೇ ಮಹಾಮತೇ !
ಸಂಕರಾತ್ ಸರ್ವವರ್ಣಾನಾಂ ದುಷ್ಪರೀಕ್ಷ್ಯೇತಿ ಮೇ ಮತಿಃ॥

ವಿವಾಹದ ಪದ್ಧತಿಗಳು ವಿವಿಧವಾಗಿ, ಅನಿಯಂತ್ರಿತವಾಗಿರು ವುದರಿಂದ ಮನುಷ್ಯನ ವರ್ಣವನ್ನು ನಿರ್ದೇಶಮಾಡುವುದೇ ಕಷ್ಟ ಎಂದು ಇದರ ಇಂಗಿತ. ಅಸವರ್ಣ ವಿವಾಹವು ಜಾತಿಸಂಕರಕ್ಕೆ ಮೂಲಭೂತವಾದ ಕಾರಣವೆಂದರೂ ಈ ಪದ್ಧತಿಯು ಪ್ರಚಲಿತ ವಾಗಿದ್ದಿತೆಂಬುದನ್ನು ಮರೆಯಲಾಗದು. ಹಲವು ವರ್ಣಗಳಲ್ಲಿ ಬಳಕೆಗೆ ಬಂದಿದ್ದ ಹಲವಾರು ಸಂಪ್ರದಾಯಗಳೆಲ್ಲವೂ ವಿವಾಹ ವಿಧಿಗಳಲ್ಲಿ ಸೇರಿಬಂದುದು ಸಹಜವೇ. ಈ ಸಂಪ್ರದಾಯ ಬಾಹುಳ್ಯ ದೊಂದಿಗೆ ಸಂದರ್ಭದ ಅಗತ್ಯಗಳೂ ಕಲೆತು ಗೊಂದಲವನ್ನು ಇನ್ನಷ್ಟು ಹೆಚ್ಚಿಸಿದುವು. ಈ ಗೊಂದಲದ ಪ್ರಮುಖ ಪ್ರಕಾರಗಳು ನಮ್ಮ ಕಾಲದವರೆಗೂ ಉಳಿದುಬಂದಿವೆ. ನಮ್ಮ ದೇಶದಲ್ಲಿ

ಇಂದು ಪ್ರವೃತ್ತವಾಗಿರುವ ವಿವಾಹ ಪದ್ಧತಿಗಳಲ್ಲಿ ಇತಿಹಾಸದ ಈ ಕರ್ಮಬಲ ಕಾಣಿಸುತ್ತದೆ. ಈ ಹಿನ್ನೆಲೆಯಲ್ಲಿಯೇ ಇಂದಿನ ಸಂಪ್ರದಾಯಗಳನ್ನು ಅರ್ಥಮಾಡಿಕೊಳ್ಳಬೇಕು.

ಆಶ್ವಲಾಯನನು ಬುದ್ಧಿವಂತನಾದವನಿಗೇ ಮಗಳನ್ನು ಕೊಡಬೇಕು ಎಂದು ತಂದೆತಾಯಿಯರನ್ನು ಎಚ್ಚರಿಸಿದ್ದಾನೆ. ಆಪಸ್ತಂಬನ ಪ್ರಕಾರ ವರನು ಬುದ್ಧಿ ಶೀಲ ಲಕ್ಷಣ ಸಂಪನ್ನನಾಗಿರಬೇಕಂತೆ, ಶ್ರುತವಂತನಾಗಿರಬೇಕಂತೆ, ಆರೋಗ್ಯವಂತನಾಗಿರಬೇಕಂತೆ. ಬೌಧಾಯನನು ಗುಣಕ್ಕೆ. ಎಂದರೆ ಚಾರಿತ್ರ್ಯಕ್ಕೆ ಹೆಚ್ಚಿನ ಪ್ರಾಶಸ್ತ್ಯ ಕೊಟ್ಟಿದ್ದಾನೆ. ಬೃಹತ್ಪರಾಶರನಂತೂ ವರಸಂಪತ್ತಿಯ ದೊಡ್ಡ ಪಟ್ಟಿಯನ್ನೇ ಕೊಟ್ಟಿದ್ದಾನೆ. ಸತ್ಕುಲ ಪ್ರಸೂತಿ, ವಿದ್ಯೆ, ತಾರುಣ್ಯ. ದೃಢಕಾಯ. ಆರೋಗ್ಯ. ಮಿತ್ರಬಾಹುಳ್ಯ. ಧನ ಮತ್ತು ಅರ್ಥಿತ್ವ ಇವು ಆ ಪಟ್ಟಿಯಲ್ಲಿ ಸೇರಿವೆ.

ಅರ್ಥಿತ್ವವೆಂದರೆ ಉತ್ಸಾಹ. ಅಭ್ಯುದಯದ ಬಯಕೆ; ಇದು ವಿರಕ್ತಿಗೆ ವಿರುದ್ಧವಾದ ಮನೋಧರ್ಮ. ಇದು ಹುಡುಗಿಯ ಕೈ ಹಿಡಿದು ಮನೆ ಮಾಡುವ ವರನಿಗೆ ಇರಲೇ ಬೇಕಾದ ಗುಣವೆಂದು ಅವನ ವಾದ. ಇಲ್ಲವೆಂದು ಯಾರು ಅಂದಾರು? ವಿದ್ಯಾಭ್ಯಾಸವು ಸಮರ್ಪಕವಾಗಿ ಮುಗಿದನಂತರವೇ ಹುಡುಗನು ವಿವಾಹಕ್ಕೆ ಯೋಗ್ಯನಾಗುವನೆಂದು ವಾತ್ಸ್ಯಾಯನನ ಅಭಿಪ್ರಾಯ.

**ಅನರ್ಹರು ಯಾರು ?**

ಕಾತ್ಯಾಯನನು ವಿವಾಹಕ್ಕೆ ಅಯೋಗ್ಯರಾದವರ ಪಟ್ಟಿಯನ್ನು ಮಾಡಿದ್ದಾನೆ — ಮಚ್ಚರು (ಉನ್ಮತ್ತರು), ಜಾತಿ ಕೆಟ್ಟವರು (ಪತಿತರು). ಕುಷ್ಠ ರೋಗ ಪೀಡಿತರು. ಷಂಡರು. ಮನುವು ಅಣ್ಣತಮ್ಮಂದಿರಿಲ್ಲದ ಹುಡುಗಿಯನ್ನು ಮದುವೆ ಆಗಬಾರದೆಂದು ಸೂಚಿಸಿದ್ದಾನೆ: ಆದರೆ ಕಾರಣಗಳನ್ನು ಸ್ಪಷ್ಟಪಡಿಸಿಲ್ಲ. ಮಹಾ

ಭಾರತದಲ್ಲಿ ಬರುವ ಸಲಹೆ ಎಲ್ಲ ಕಾಲಕ್ಕೂ ಎಲ್ಲ ಜನರಿಗೂ ಮಾನ್ಯವಾದದ್ದು: ಸ್ನೇಹಕ್ಕಾಗಲೀ ವಿವಾಹಸಂಬಂಧಕ್ಕಾಗಲೀ ಎರಡೂ ಕಡೆಯ ಧನಸಂಪತ್ತಿ ಮತ್ತು ಸಂಸ್ಕೃತಿಯ ನೆಲೆ ಸಮವಾಗಿರಬೇಕು. 'ಯಯೋರೇವ ಸಮಂ ವಿತ್ತಂ ಯಯೋರೇವ ಸಮಂಶ್ರುತಂ। ತಯೋರ್ಮೈತ್ರೀ ವಿವಾಹಶ್ಚ ನತು ಪುಷ್ಟ ವಿಪುಷ್ಟಯೋಃ'. ಏರು ಪೇರಿದ್ದರೆ ಸಂಬಂಧವು ಸುಗಮವಾಗಲಾರದು, ದಢವಾಗಲಾರದು. ಇದು ಅನುಭವ ಮಾತೆಂಬುದರಲ್ಲಿ ಸಂಶಯವಿಲ್ಲ.

## ವರ್ಣ, ಗೋತ್ರ, ಪ್ರವರ

ವಿವಾಹಸಂಬಂಧಕ್ಕೆ ಅಗತ್ಯವಾಗಿ, ಅನಿವಾರ್ಯವಾಗಿ ನೋಡಲೇಬೇಕಾದ ನಿಯಮಗಳೆಂದರೆ ವರ್ಣ, ಗೋತ್ರ, ಪ್ರವರ, ಪಿಂಡ ಇವುಗಳಿಗೆ ಸಂಬಂಧಿಸಿದುವು. ಅಸವರ್ಣ ವಿವಾಹವನ್ನು ಯಾವ ಕಾಲದಲ್ಲಿಯೂ ನಮ್ಮವರು ಮನಸಾರೆ ಒಪ್ಪಲಿಲ್ಲ. ಇಂಥ ವಿವಾಹಗಳು ಸಂದರ್ಭ ವಶದಿಂದ ಅನಿವಾರ್ಯವಾದಾಗ ವಿಧಿಯಿಲ್ಲದೆ ಅನುಲೋಮ, ಪ್ರತಿಲೋಮಗಳ ನಿಯಮವನ್ನು ಹಾಕಿ ಒಪ್ಪಿಕೊಂಡರು. ವಧೂವರರು ಸವರ್ಣರಾಗಿರುವುದೇ ಉತ್ತಮವೆಂದು (ತೇಷಾಂ ಸವರ್ಣಜಾಃ ಶ್ರೇಷ್ಠಾಃ) ಎಲ್ಲ ಸ್ಮೃತಿಕಾರರೂ ಅಂಗೀಕರಿಸಿದ್ದಾರೆ. ಆದರೆ ವರ್ಣದಲ್ಲಿ ಸಗೋತ್ರ ವಿವಾಹವು ನಿಷಿದ್ಧವಾದುದು. ಗೋತ್ರದ ಪ್ರಸ್ತಾಪ ಇಲ್ಲಿ ಪ್ರಸ್ತುತವಲ್ಲ. ವಧೂವರರ ಗೋತ್ರಗಳು ಬೇರೆ ಬೇರೆಯಾಗಿರಬೇಕೆಂಬ ನಿಯಮವಿದೆ ಎಂದಷ್ಟು ಹೇಳಿದರೆ ಸಾಕು. ಹಾಗೆಯೇ ಪ್ರವರಗಳೂ ವಿಭಿನ್ನವಾಗಿರಬೇಕು. ಅಷ್ಟು ಮಾತ್ರವಲ್ಲದೆ, ನಿರ್ದಿಷ್ಟವಾದ ತಲೆಮಾರುಗಳಷ್ಟು ಹಿಂದೆ ಪಿತೃವರ್ಗದವರು ಸಪಿಂಡೀಕೃತರಾಗಿರಬಾರದು. ಎಂದರೆ ಹುಡುಗ ಹುಡುಗಿಯರ ಹಿರಿಯರು ಒಬ್ಬರೇ ಆಗಿರಬಾರದು. ಹಾಗಿದ್ದರೆ

ಅವರಲ್ಲಿ ಸೋದರ–ಸೋದರಿಯರ ವಾವೆ ಬಂದು ವಿವಾಹ ಸಂಬಂಧ ಅನುಚಿತವಾಗುತ್ತದೆ. ಸವರ್ಣ ವಿವಾಹವು ಸಮ್ಮತವಾದರೂ ಸಗೋತ್ರ, ಸಪ್ರವರ, ಸಪಿಂಡ ವಿವಾಹಗಳು ನಿಷಿದ್ಧವಾಗಿವೆ. ಗೋಭಿಲ ಗೃಹ್ಯ ಸೂತ್ರದಲ್ಲಿ, ಹುಡುಗಿಯು 'ಸವರ್ಣಾ ಅಸಮಾನಾರ್ಷಾ ಅಮಾತೃ–ಪಿತೃಗೋತ್ರಜಾ' ಆಗಿರಬೇಕೆಂಬ ನಿಯಮವಿದೆ.

ವಿವಾಹಕ್ಕೆ ಅನುಕೂಲವಾದ ಮುಹೂರ್ತವನ್ನು ನಿಶ್ಚಯಿಸುವುದು ತುಂಬ ಹಿಂದಿನಿಂದ ಬಂದ ಪದ್ಧತಿಯಾದರೂ ಜಾತಕಗಳನ್ನು ಪರಿಶೀಲಿಸಿ ಸಂಬಂಧವನ್ನು ನಿರ್ಣಯಿಸುವ ಸಂಪ್ರದಾಯವು ಮಧ್ಯ ಕಾಲದಿಂದ ಮುಂದೆ ಬಳಕೆಗೆ ಬಂದದ್ದು. ಧರ್ಮಶಾಸ್ತ್ರಗಳಲ್ಲಿ ಇವಕ್ಕೆ ಹೆಚ್ಚಿನ ಮಹತ್ವವಿಲ್ಲ; ಪ್ರಾಚೀನ ಕಾಲದಲ್ಲಂತೂ ಇದು ಪ್ರಚಲಿತವಾಗಿದ್ದಿತೆನ್ನಲು ಆಧಾರವೇ ಇಲ್ಲ.

## ಕನ್ಯಾದಾನ

ವಿವಾಹವನ್ನು 'ಹೆಣ್ಣು ಕೊಡುವುದು', 'ಹೆಣ್ಣನ್ನು ತಂದುಕೊಳ್ಳುವುದು' ಎಂದೇ ವ್ಯವಹರಿಸುತ್ತಾರಷ್ಟೆ. ಇದರ ಹಿನ್ನೆಲೆಯಲ್ಲಿ ಹುಡುಗಿಗೆ ವರಣದ ಸ್ವಾತಂತ್ರ್ಯ ಇಲ್ಲವೆಂಬ ಕಲ್ಪನೆಯಿದೆ. ಸೀತಾ ಸ್ವಯಂವರವಾಗಲೀ ದ್ರೌಪದೀ ಸ್ವಯಂವರವಾಗಲೀ ಹೆಸರಿಗೆ ಸ್ವಯಂವರವಾದರೂ ಅಲ್ಲಿ ವಧು ಪರತಂತ್ರಳೇ. ಅವಳಿಗೆ ಸ್ವಚ್ಛಂದವಾದ ಸ್ವಾತಂತ್ರ್ಯವಿಲ್ಲ. ಯಾವ ಕಾಲದಲ್ಲೂ ಹುಡುಗಿಯ ತಂದೆ ಹುಡುಗಿಯನ್ನು ವರನಿಗೆ 'ಕೊಡುವ' ಪದ್ಧತಿಯೇ ಹೆಚ್ಚು ಬಳಕೆಯಲ್ಲಿದ್ದುದು. ಈ ಕಾರಣದಿಂದಲೇ ವೈವಾಹಿಕ ವಿಧಿಯಲ್ಲಿ 'ಕನ್ಯಾದಾನ' ಎಂಬ ವಿವರವು ಸಾಂಕೇತಿಕವಾಗಿ ನಿಂತಿರುವುದು. 'ದೇಯಾ ವರಾಯ ವಿದುಷೇ' ಎಂದು ಮನುವೂ ಕನ್ಯೆಯ ವಿಚಾರವಾಗಿ ನಿರೂಪಿಸುತ್ತಾನೆ. ಈ ಪದ್ಧತಿಗೆ ಸಾವಿತ್ರಿಯ ಕಥೆಯೊಂದು ಅಪವಾದ. ಅಶ್ವಪತಿರಾಜನ ಮಗಳಾದ ಸಾವಿತ್ರಿಯು

ತನಗೆ ಅನುರೂಪನಾದ ವರನನ್ನು ಅರಿಸಿಕೊಂಡು ನೆರೆನಾಡುಗಳಲ್ಲಿ ತಾನೇ ತಿರುಗಾಡಿ ಬರುತ್ತಾಳೆ. ತನಗೆ ತಕ್ಕ ಜೋಡಿಯನ್ನು ಕಾಣದೆ ಹಿಂದಿರುಗಿ ಬರುವಾಗ ವನಪ್ರದೇಶದಲ್ಲಿ ದ್ಯುಮತ್ಸೇನನ ಮಗ ಸತ್ಯವಾನನನ್ನು ಕಂಡು ಅವನಲ್ಲಿ ಅನುರಕ್ತ ಳಾಗುತ್ತಾಳೆ. ಇಲ್ಲಿಯೂ ಅಶ್ವಪತಿ ರಾಜ ತಟ್ಟನೆ ಒಪ್ಪುವುದಿಲ್ಲ. ಸತ್ಯವಾನನು ಅಲ್ಪಾಯು ಎಂದು ತಿಳಿದು ಅವನಿಗೆ ಕನ್ಯಾದಾನ ಮಾಡಲು ನಿರಾಕರಿಸುತ್ತಾನೆ. ಆದರೆ ಸಾವಿತ್ರಿಯ ಹಟವೇ ಗೆಲ್ಲುತ್ತದೆ.

ತಂದೆತಾಯಿಯರ ಮನೆತನ ಉಳಿಯಲು ಗಂಡುಮಗನೇ ಕಾರಣ ನೆಂದೂ ಹೆಣ್ಣುಮಗಳು ಪರಕೀಯಳೆಂದೂ, ಒಂದಲ್ಲ ಒಂದು ದಿನ ಹೆರವರ ಮನೆಗೆ ಹೋಗಿ ಅಲ್ಲಿ ಅವರ ಮನೆತನ ಉಳಿಸಲು ನೆರವಾಗುವಳೆಂದು ಜಗತ್ತಿನ ಬಹು ದೇಶಗಳಲ್ಲಿರುವ ನಂಬಿಕೆ. ಹುಟ್ಟಿದ ಮಗಳು 'ನ್ಯಾಸ'ಪೆಂದೂ, ತಕ್ಕ ವರನಿಗೆ ಅವಳನ್ನು ಕೊಟ್ಟುಬಿಟ್ಟರೆ ತಂದೆತಾಯಿಯರ ಭಾರ ಹಗುರವೆಂದೂ ಕಲ್ಪನೆ ಯಿದೆ. ಶಕುಂತಲೆಯನ್ನು ದುಷ್ಯಂತನ ಬಳಿ ಕಳುಹಿಸಿದ ಕಣ್ವ ಋಷಿಯ ಮನಸ್ಸು 'ಪ್ರತ್ಯರ್ಪಿತನ್ಯಾಸ'ದಿಂದ ಪ್ರಸನ್ನವಾಯಿತಂತೆ. ಈ ಮನೋಧರ್ಮದಿಂದ ಪ್ರಾಚ್ಯ ದೇಶಗಳಲ್ಲಿ ಹುಡುಗಿಯರ ಪರಿ ಸ್ಥಿತಿ ಒಮ್ಮೊಮ್ಮೆ ದಾರುಣವಾಗುವುದುಂಟು. "ಜಾತೇತಿ ಕನ್ಯಾ ಮಹತೀವ ದುಃಖಂ। ಕಸ್ಮೈ ಪ್ರದಾಯೇತಿ ಮಹಾನ್ ವಿತರ್ಕಃ। ದತ್ವಾ ಸುಖಂ ಪ್ರಾಪ್ಸ್ಯತಿವಾ ನವೇತಿ। ಕನ್ಯಾ ಪಿತೃತ್ವಂ ಖಲು ನಾಮ ಕಷ್ಟಂ॥" ಎಂಬುದು ನಾಣ್ನುಡಿಯಾಗಿ ಪರಿಣಮಿಸಿದೆ. ಹೆಣ್ಣು ಮಕ್ಕಳನ್ನು ಗಂಡು ಮಕ್ಕಳಿಗಿಂತ ಕೀಳೆಂದು ಕಡೆಗಣ್ಣಿನಿಂದ ನೋಡುವ ಪದ್ಧತಿ ಕೆಲವಾರು ತಲೆಮಾರುಗಳಿಂದ ಬಂದಿದೆ.

## ಕನ್ಯಾ ಲಕ್ಷಣ

ಈ ಮನೋಧರ್ಮ ಹಿಂದೆ ಇರಲಿಲ್ಲ. ಧರ್ಮಶಾಸ್ತ್ರಗಳು 'ಪುತ್ರೇಣ ದುಹಿತಾ ಸಮಾ' ಎಂದೇ ಹೇಳುತ್ತವೆ. ಮಗನಂತೆಯೇ ಮಗಳೂ 'ಲಾಲನೀಯಾ ಪಾಲನೀಯಾ ಶಿಕ್ಷಣೀಯಾ ತು ಯತ್ನತಃ' ಎಂಬುದು ಮನುವಿನ ಮಾತು. ಮದುವೆ ಆಗುವ ಹುಡುಗಿ ಯುವತಿಯಾಗಿರಬೇಕು, ಪ್ರೌಢೆಯಾಗಿರಬೇಕು. ವಿದ್ಯಾವತಿಯಾಗಿರಬೇಕು ಎಂಬುದು ಧರ್ಮ ಶಾಸ್ತ್ರಕಾರರ ದೃಷ್ಟಿ. ಸ್ವೈರಿಣಿಯಾದವಳಿಗೂ ಸಮಾಜದಲ್ಲಿ ಸ್ಥಾನವಿದ್ದಿತು. ಇತಿಹಾಸದ ದುರ್ದೈವ್ಯ ಪ್ರವಾಹದಲ್ಲಿ ಮಧ್ಯಕಾಲದ ಸುಮಾರಿಗೆ ಬಾಲ್ಯ ವಿವಾಹ, ವಿಧವಾ ವಿವಾಹ ನಿಷೇಧ ಮುಂತಾದ ಪದ್ಧತಿಗಳು ಪ್ರವೃತ್ತವಾಗಿ ಹೆಂಗಸಿನ ಸ್ಥಾನ ಇಳಿಯಿತು.

## ವಧುವಿನ ಹಿರಿಮೆ

ಹುಡುಗಿಯನ್ನು ಮೊದಲು ಸೋಮನೂ. ಅನಂತರ ವಿಶ್ವಾವಸುವೆಂಬ ಗಾಂಧರ್ವನೂ. ಮುಂದೆ ಅಗ್ನಿಯೂ, ಕಡೆಯಲ್ಲಿ ವರನೂ ಅನುಭವಿಸುತ್ತಾರೆಂದು ಸಂಕೇತ ಪ್ರಮುಖವಾದ 'ಕಲ್ಪನೆ'. ಚಂದ್ರನಿಂದ ದೇಹದ ಬೆಳವಣಿಗೆ. ಗಾಂಧರ್ವನಿಂದ ಮಾತಿನ ಬೆಳವಣಿಗೆ (ಗಾಂ ವಾಣೀಂ ಧಾರಯತಿ ಪ್ರೇರಯತಿ ಇತಿ ಗಾಂಧರ್ವಃ). ಅಗ್ನಿಯಿಂದ ಮನಸ್ಸಿನ ಬೆಳವಣಿಗೆ ಮೂರೂ ಆದ ನಂತರವೇ ವರನ ಕೈ ಹಿಡಿಯಲು ಯೋಗ್ಯಳಾಗುವಳೆಂಬುದು ಇಲ್ಲಿ ಇಂಗಿತ. ಏಕೆಂದರೆ ಮದುವೆಯಾದ ನಂತರ ಗೃಹಿಣಿಯೇ ಗೃಹವಷ್ಟೆ. ಈ ದೃಷ್ಟಿ ಋಗ್ವೇದದಲ್ಲಿಯೂ ಕಾಣಬರುತ್ತದೆ. 'ಜಾಯೇ ದಸ್ತಂ' ಎಂದು ಮೂರನೆಯ ಮಂಡಲದಲ್ಲಿ ಬರುವ ವರ್ಣನೆಯಿಂದ ವಧುವಿನ ಹಿರಿಮೆ ವ್ಯಕ್ತವಾಗುತ್ತದೆ. ಶತಪಥ ಬ್ರಾಹ್ಮಣವು "ಅರ್ಧೋ ವಾ ಏಷ ಆತ್ಮನೋ ಯಜ್ಜಾಯಾ.

ತಸ್ಮಾದ್ಯಾವಜ್ಜಾಯಾಂ ನ ವಿಂದತೇ ನೈವ ತಾವತ್ ಪ್ರಜಾಯತೇ ಅಸರ್ವೋ ಹಿ ತದ್ಭವತಿ" ಎಂದು ಈ ಮನೋಧರ್ಮ ವನ್ನು ಸ್ಪಷ್ಟಪಡಿಸುತ್ತದೆ.

ಮಹಾಭಾರತದಲ್ಲಿ ಭಾರ್ಯೆಯೇ ಧರ್ಮಾರ್ಥಕಾಮಗಳೆಂಬ ತ್ರಿವರ್ಗಕ್ಕೂ ಮೂಲವೆಂದೂ 'ಶ್ರೇಷ್ಠತಮಃ ಸಖಾ' ಎಂದೂ ವರ್ಣನೆಯಿದೆ. ಈ ಭಾರವನ್ನು ನಿರ್ವಹಿಸಲು ವಧುವು ಪ್ರೌಢೆ ಯಾಗಿರಬೇಕು, ವಿದ್ಯಾವತಿಯಾಗಿರಬೇಕು, ಶೀಲ ಸಂಪನ್ನೆಯಾಗಿರ ಬೇಕು. ವಿವಾಹದ ಪ್ರಯೋಜನಗಳಲ್ಲಿ 'ಧರ್ಮಸಂಪತ್ತಿ' ಪ್ರಮುಖವಾದುದು; ಅನಂತರ ಪ್ರಜಾ (ಮಕ್ಕಳು); ಕಡೆಯ ದಾಗಿ ರತಿ (ಸುಖಭೋಗ). ಗಂಡನು ಹೆಂಡತಿಯಲ್ಲಿಯೇ ಮಗನಾಗಿ ಹುಟ್ಟುತ್ತಾನೆಂಬ ನಂಬಿಕೆಗೂ ಈ ಮನೋಧರ್ಮವೇ ಹಿನ್ನೆಲೆ. 'ಆತ್ಮಾ ವೈ ಪುತ್ರನಾಮಸಿ' ಎಂಬ ವೈದಿಕ ನಿಲುವಿಗೂ ಇದೇ ಅರ್ಥ.

## ಪುನರ್ಜನ್ಮದ ಸಂಬಂಧ

ಮದುವೆಯಾದ ನಂತರ ಹುಡುಗಿಯು ಗಂಡನ ಮನೆಗೆ ಹೋಗಿ ಅಲ್ಲಿ ನಿಲ್ಲುವ ಸಂಪ್ರದಾಯ ವೇದದ ಕಾಲದಿಂದ ಬಂದಿದೆ. ಅವಳ ಗೋತ್ರವೂ ಆ ಮುಂದೆ ಗಂಡನ ಗೋತ್ರವೆಂದೇ ಪರಿಗಣನೆ; ತೌರು ಮನೆಯ ನೆಂಟು ಬಹುಮಟ್ಟಿಗೆ ಕಳಚಿಬೀಳುವುದು. ಹುಡುಗಿಯ ಪಾಲಿಗೆ ವಿವಾಹವು ಪುನರ್ಜನ್ಮದ ಸಂದರ್ಭ. ಅಲ್ಲಿಯವರೆಗೆ ಆಕೆಯನ್ನು ವಶಮಾಡಿಕೊಂಡಿದ್ದ ಗಾಂಧರ್ವನೂ ವರನಿಗಾಗಿ ಅವಳನ್ನು ಬಿಟ್ಟುಕೊಡಬೇಕೆಂಬ ಪ್ರಾರ್ಥನೆಯನ್ನು ಸಲ್ಲಿಸುವ ವಿಧಿಯಿದೆ. ಮೊದಲಿಗೆ ಹುಡುಗಿಯರಿಗೂ ಹುಡುಗ ರಂತೆ ಉಪನಯನ ಮಾಡಿ ವೇದಾಧ್ಯಯನ ಮಾಡಿಸುವ ಪದ್ಧತಿ ಯಿದ್ದಿತು. ವೈದಿಕ ಯುಗದಲ್ಲಿ ಹಲವಾರು ಅವಿವಾಹಿತ ಬ್ರಹ್ಮ

ವಾದಿನಿಯರು ಇದ್ದ ಉಲ್ಲೇಖವಿದೆ. ಮಗಳಿಗೆ ವಿವಾಹವು ಆಗಲೇ ಬೇಕೆಂಬ ನಿಯಮವೂ ಆ ಕಾಲಕ್ಕೆ ಇರಲಿಲ್ಲವೆಂದು ತಿಳಿದು ಬರುತ್ತದೆ. ಆದರೆ ಬರುಬರುತ್ತಾ ಈ ನಿಲುವು ಬದಲಾಯಿತು. ಹೆಣ್ಣುಮಕ್ಕಳಿಗೆ ಉಪನಯನ ಮಾಡುವ ಪದ್ಧತಿಯು ನಿಂತು ವಿವಾಹದಲ್ಲೇ ಉಪನಯನ ವಿಧಿಯನ್ನು ಸಾಂಕೇತಿಕವಾಗಿ ಸೇರಿಸುವ ಸಂಪ್ರದಾಯ ಉಳಿದಿದೆ. ಸ್ತ್ರೀಯರಿಗೆ ವೇದಾಧ್ಯಯನದ ಅಧಿಕಾರವೂ ಇಲ್ಲವೆಂಬ ಕಲ್ಪನೆ ಇದರ ನೆರಳಿನಲ್ಲಿಯೇ ಮೂಡಿಬಂದಿತು. ಹೀಗಾಗಿ ಹುಡುಗಿಯರಿಗೆ ಮದುವೆಯೇ ಮುಖ್ಯ ಸಂಸ್ಕಾರವಾಗಿ ಪರಿಣಮಿಸಿತು.

### ಏಕಪತ್ನೀವ್ರತ

ವೇದದ ಕಾಲದಿಂದಲೂ ಏಕಪತ್ನೀವ್ರತವು ಬಳಕೆಯಲ್ಲಿದ್ದಿತು. ಸಂಸ್ಕೃತಿಯ ವಿಕಾಸದಲ್ಲಿ ವೈವಾಹಿಕ ಶೈಲಿಗಳ ವಿಚಾರವಾಗಿ ಹಲವಾರು ಪ್ರಯೋಗಗಳು ನಡೆದು ವಿವಿಧ ಪ್ರಾಂತ್ಯಗಳಲ್ಲಿ ವಿಭಿನ್ನ ಆಚಾರಗಳು ಪ್ರಚಲಿತವಾಗಿದ್ದರೂ ಏಕಪತ್ನೀ ವಿವಾಹದ ಹೆಚ್ಚಳವೇನೂ ಇಳಿಯಲಿಲ್ಲ. ಕ್ಷತ್ರಿಯರಲ್ಲಿ. ರಾಜನ್ಯರಲ್ಲಿ, ಬಹು ಪತ್ನೀತ್ವ ಪದ್ಧತಿಯಿದ್ದಿತು ನಿಜ. ಆದರೆ ಬರುಬರುತ್ತ ಇದು ಮರೆಯಾಯಿತು. ದಶರಥನಿಗೆ ಮೂವರು ಹೆಂಡತಿಯರಿದ್ದರೂ, ರಾಮನಿಗಿದ್ದುದು ಸೀತೆಯೊಬ್ಬಳೇ. ಲಕ್ಷ್ಮಣನಿಗಿದ್ದುದು ಊರ್ಮಿಳೆ ಯೊಬ್ಬಳೇ. ಧರ್ಮಸಂಪತ್ತಿಯ ದೃಷ್ಟಿಯಿಂದ ಒಬ್ಬಳೇ ಹೆಂಡತಿ ಇರಬೇಕೆಂಬುದು ರಾಜರಿಗೂ ಅನ್ವಯಿಸುವ ವಿಧಿಯೇ. 'ಧರ್ಮಪತ್ನಿ', 'ಗೃಹ ಮೇಧಿನಿ'. 'ಅಗ್ರ ಮಹಿಷಿ', 'ಪಿರಿಯರಸಿ' ಇವೆಲ್ಲ ಈ ಅರ್ಥವನ್ನು ಹೇಳುವ ಶಬ್ದಗಳೇ. ಅಂತಃಪುರದ ಉಳಿದ ಹೆಂಡತಿಯರೆಲ್ಲ ಕಾಮ್ಯಸಾಮಗ್ರಿಗಳಷ್ಟೆ. ಆದರೆ ಸಂದರ್ಭ ವಿಶೇಷದಿಂದ ಅನೇಕವಿವಾಹ ಸಾಮಾನ್ಯ ಜನರಿಗೂ ರಾಜರಿಗೂ

ಉಚಿತವಾದದ್ದೆಂದು ಶಾಸ್ತ್ರಕಾರರೇ ಹೇಳಿದ್ದರು. ಮಾಡಿಕೊಂಡ ಹೆಂಡತಿ ಬಂಜೆಯಾದರೆ, ಅಥವಾ ಆಕೆಯಲ್ಲಿ ಹೆಣ್ಣುಮಕ್ಕಳೇ ಆದರೆ ಇಂಥ ಸಂದರ್ಭಗಳಲ್ಲಿ ಇನ್ನೊಂದು ಮದುವೆ ಮಾಡಿಕೊಳ್ಳ ಬಹುದಾಗಿದ್ದಿತು. ಮಕ್ಕಳ ಬಯಕೆ. ಗಂಡು ಮಕ್ಕಳಿಂದ ಸದ್ಗತಿಯೆಂಬ ನಂಬಿಕೆ ಇಲ್ಲಿ ಕೆಲಸ ಮಾಡುತ್ತವೆ.

**ಪಾತಿವ್ರತ್ಯ**

ಒಬ್ಬಳೇ ಹೆಂಡತಿಯಿಂದ ಗಂಡಸಿಗೆ ಕಾಮನೆ ತೀರದಾದರೆ ಪಲವಾರು ವಿವಾಹಗಳನ್ನು ಮಾಡಿಕೊಳ್ಳಬಹುದೆಂದು ವಾತ್ಸ್ಯಾಯನನ ಸಲಹೆ. ಅಪ್ಯಾಯಮಾನವಾದ ಈ ಸಲಹೆಯನ್ನು ನಮ್ಮ ನಾಡಿನ ರಾಜರು, ರಾಜವಂಶದವರು, ಪೇರ್ಗಡೆಗಳು ಕಾರ್ಯಗತ ಮಾಡಿದ್ದರು. ಆದರೂ ಹೆಂಡತಿಯ ಪಾಲಿಗೆ ಈ ಔದಾರ್ಯ ಶಾಸ್ತ್ರಕಾರರಿಂದ ದೊರೆಯಲಿಲ್ಲ. ಬಹುಮಟ್ಟಿಗೆ ಏಕಪತ್ನೀತ್ವವೇ ಬಳಕೆಯಲ್ಲಿದ್ದ ಪದ್ಧತಿ. ಏಕಪತ್ನೀವ್ರತವು ಗಂಡಸಿಗೆ ಮಾನ್ಯವಾದಂತೆ ಹೆಂಡತಿಯಲ್ಲಿ ಇರಬೇಕಾದ ಗುಣಗಳಲ್ಲಿ ಪಾತಿವ್ರತ್ಯ ಎಂಬುದು ಪ್ರಮುಖವಾಯಿತು. ಸೀತೆಯ. ಸಾವಿತ್ರಿಯ ಪಾತಿವ್ರತ್ಯ ಇತಿಹಾಸ ಪ್ರಸಿದ್ಧವಾಗಿದೆ, ಆದರ್ಶವಾಗಿದೆ. ಕುರುಡ ಧೃತರಾಷ್ಟ್ರನ ಕೈ ಹಿಡಿದ ಗಾಂಧಾರಿ ಗಂಡನು ಕಾಣಲಾಗದುದು ತನಗೂ ಕಾಣಬಾರದೆಂದು ಕಣ್ಣಿಗೆ ಬಟ್ಟೆ ಕಟ್ಟಿಸಿಕೊಂಡೇ ಇರುತ್ತಿದ್ದಳಂತೆ. ಪಾಂಡು ತೀರಿಕೊಂಡಾಗ ಅವನ ಹೆಂಡತಿ ಮಾದ್ರಿ ಸಹಗಮನ ಮಾಡಿದಳಂತೆ. ಪಾತಿವ್ರತ್ಯದ ಮಾಹಾತ್ಮ್ಯೆಯನ್ನು ಹೇಳುವ ಸಾವಿರಾರು ಕಥೆಗಳು ಜನರಲ್ಲಿ ಬಳಕೆಯಲ್ಲಿವೆ. ಇವೆಲ್ಲ ಗಂಡಸರು ಸಿದ್ಧ ಮಾಡಿದ ಕಥೆಗಳೇ ಎಂಬುದನ್ನು ಮರೆಯಬಾರದಲ್ಲವೇ?

ಪಾತಿವ್ರತ್ಯಕ್ಕೆ ಜನರು ಅಳವಡಿಸಿದ ಪ್ರಾಶಸ್ತ್ಯದಿಂದಾಗಿ ವಿಧವಾ

ವಿವಾಹವು ನಿಷಿದ್ಧವಾಯಿತು. ಗಂಡನು ತೀರಿಕೊಂಡನಂತರ ಹೆಂಡತಿಯು ವಿರಕ್ತಿ ತಳೆದು ಸಂಯಮದಿಂದ, ನಿರುತ್ಸಾಹದಿಂದ ಬಾಳನ್ನು ನೂಕಬೇಕೆಂಬ ಕಲ್ಪನೆ ಕೆಲವೊಮ್ಮೆ ಸಹಜವಾಗಿ ಮೂಡಿಬಂದರೂ ಹಲವು ಸಂದರ್ಭಗಳಲ್ಲಿ ಇದು ಬಲವಂತದ ಮಾತಾಗುತ್ತದೆ. ಗಂಡನ ಮರಣದ ಸೋಂಕು ಹೆಂಡತಿಗೆ ಯಾವ ಜೀವವೂ ಉಳಿಯುವುದೆಂದೂ, ಇದರಿಂದಾಗಿ ಅವಳು ಯಾವ ಮಂಗಳ ಕಾರ್ಯದಲ್ಲಿಯೂ ಪಾಲ್ಗೊಳ್ಳಲಾಗದೆಂದೂ ನಂಬಿಕೆ ಬಂದಿತು. ಈ ನಂಬಿಕೆಯೇನೋ ಈಗ ಶಿಥಿಲವಾಗಿದೆಯಷ್ಟೆ.

## 4. ವೈದಿಕ ವಿವಾಹ ವಿಧಿಗಳು

ಈಗ ಬಹುಮಟ್ಟಿಗೆ ಪ್ರಚಲಿತವಾಗಿರುವ ವಿವಾಹ ಪದ್ಧತಿಯು ವೈದಿಕ ಯುಗದಿಂದ ಬಂದ ಸಂಸ್ಕಾರ ವಿಶೇಷಗಳನ್ನು ಅಡಕಗೊಳಿಸಿ ಕೊಂಡಿದೆ. ಆದರೆ ಆ ಯುಗದಲ್ಲಿ ಸರಳವಾಗಿದ್ದ ವಿಧಿಗಳು ಬರು ಬರುತ್ತಾ ಸಂಕೀರ್ಣವಾಗಿ ನಮ್ಮ ಕಾಲಕ್ಕೆ ಜಟಿಲವಾಗಿ ಪರಿಣಮಿ ಸಿವೆ. ಅಪ್ರಸ್ತುತವಾದ, ಅನಗತ್ಯವಾದ ಅರ್ವಾಚೀನ ಸಂಪ್ರದಾಯ ಗಳು ಹಲವಾರು ಸೇರಿಕೊಂಡು ಬಂದಿವೆ. ದೇಶಾಚಾರ, ಕುಲಾ ಚಾರಗಳ ಪ್ರಭಾವ ಮೂಡಿಬಂದಿವೆ. ವಿವಾಹದಲ್ಲಿ ಕೂಡುವ ಎರಡು ಚೇತನಗಳಿಗೆ ಆಧಿಭೌತಿಕ ಮತ್ತು ಆಧ್ಯಾತ್ಮಿಕ ಸಂಸ್ಕಾರ ಗಳನ್ನು ಒದಗಿಸಿ ಕೊಡುವುದು ವೈದಿಕ ವಿವಾಹದ ಮುಖ್ಯ ಉದ್ದೇಶವಾಗಿದ್ದಿತು. ಈ ಕಾಲದ ವೈವಾಹಿಕ ಪದ್ಧತಿಗಳಲ್ಲಿ ಈ ವೈದಿಕ ವಿಧಿಗಳು ಉಳಿದು ಬಂದಿದ್ದರೂ ಅವುಗಳ ಸಂಕೇತ, ಇಂಗಿತ ಬಹುಮಟ್ಟಿಗೆ ನಿಷ್ಫಲವಾಗಿವೆ. ಮದುವೆಯಾಗುವ ವಧೂವರರಿಗಾಗಲೀ, ಮಾಡಿಸುವ ಪುರೋಹಿತರಿಗಾಗಲೀ ತಾವು ಬಳಸುವ ಮಂತ್ರಗಳ ಅರ್ಥ ತಿಳಿದಿರುವುದಿಲ್ಲವಷ್ಟೆ.

ಈಗಿನ ವಿವಾಹದಲ್ಲಿ ಸಂಸ್ಕಾರದ ದೃಷ್ಟಿಗಿಂತ ಉತ್ಸವದ ಉದ್ದೇಶವೇ ಹೆಚ್ಚು. ಅದೊಂದು ಸಂಭ್ರಮದ ಸಂದರ್ಭ, ಸಾಮಾಜಿಕ ಓಲಾಟ, ಶ್ರೀಮಂತರಿಗೆ ವೈಭವದ ವ್ಯವಹಾರ, ಧನವ್ಯಯದ ಸಾಧನ. ಈ ಪ್ರಯೋಜನಗಳಿಗಾಗಿ ಹಲವಾರು ಸಂಪ್ರದಾಯಗಳು ಒದಗಿಬಂದಿರುವುದು ಸ್ಪಷ್ಟವಾಗಿದೆ. ನಿಶ್ಚಿ ತಾರ್ಥ, ವರಪೂಜೆ, ಜಾನವಾಸ, ಕಾಶೀಯಾತ್ರೆ, ನಾಗೋಲಿ ಮುಂತಾದ ವಿವರಗಳು ವೈದಿಕ ವಿವಾಹದ ಅಂಗಗಳಲ್ಲ; ಇತ್ತೀಚೆಗೆ

ಬೆಳೆದುಬಂದುವು. ಆರತಕ್ಷತೆ (ರಿಸೆಪ್ಷನ್)ಗಂತೂ ಯಾವ ಸಂಸ್ಕಾರದ ಪ್ರಯೋಜನವೂ ಇರದು; ಆದರೆ ಇದೇ ಈಗಿನ ಮದುವೆಯ ಪ್ರಮುಖ ವಿವರವಷ್ಟೆ. ಕನ್ಯಾದಾನ ಮತ್ತು ಮಂಗಳ ಸೂತ್ರ ಬಂಧನ ಇವೆರಡೂ ಸ್ಮೃತಿಸಮ್ಮತವಾದ ವಿಧಿಗಳಾದರೂ ವೈದಿಕ ವಿವಾಹದ ವಿವರಗಳಲ್ಲ. ಹೀಗೆಯೇ ಗಣಪತಿ ಪೂಜೆ, ಪುಣ್ಯಾಹವಾಚನ, ಮಾತೃಕಾ ಪೂಜೆ, ನಾಂದೀ ಶ್ರಾದ್ಧ, ಗ್ರಹಯಜ್ಞ, ಮಂಟಪ ಪ್ರತಿಷ್ಠೆ ಮತ್ತು ಕುಲದೇವತಾ ಪೂಜೆಗಳು ಸ್ಮೃತಿಗಳಲ್ಲಿ ವಿಧಾಯಕವಾದ ವಿವರಗಳು; ಆದರೆ ಕಾಲಾನುಕ್ರಮದಲ್ಲಿ ಬೆಳೆದುಬಂದುವು. ದೇಶದಲ್ಲಿ ಎಲ್ಲ ಹಿಂದೂ ಜನರ ಮದುವೆಗಳಲ್ಲಿಯೂ ಇಂದು ಈ ವಿಧಿಗಳು ನಡೆಯುತ್ತವೆ.

## ವಾಗ್ದಾನ

ವೈದಿಕ ವಿವಾಹದ ಪ್ರಮುಖ ವಿವರಗಳೆಂದರೆ ಪಾಣಿಗ್ರಹಣ, ವಿವಾಹ ಹೋಮ, ಗೃಹಪ್ರವೇಶ ಮತ್ತು ಗರ್ಭಾಧಾನ. ತಂದೆ, ತಾತ, ಮುತ್ತಾತಂದಿರ ಹೆಸರು, ಗೋತ್ರ, ಪ್ರವರ ಹಿಡಿದು ವಧೂವರರನ್ನು ನಿರ್ದೇಶಿಸಬೇಕೆಂಬ ವಿಧಿಯಿದೆ. "(ಅಮುಕ) ಗೋತ್ರಸ್ಯ (ಅಮುಕ) ಪ್ರವರಸ್ಯ (ಅಮುಕ) ಶರ್ಮಣಃ ಪ್ರಪೌತ್ರಾಯ. (—ಇದೇರೀತಿ ಇಂಥವರ) ಪೌತ್ರಾಯ. (ಇದೇ ರೀತಿ ಇಂಥವರ) ಪುತ್ರಾಯ (ಇಲ್ಲಿ ವರನ ಹೆಸರು ಹೇಳಿ)" ಮುಂದೆ ವಧುವಿಗೂ ಪ್ರಪಿತಾಮಹ, ಪಿತಾಮಹ, ಪಿತೃಗಳ ನಾಮಗೋತ್ರ ಪ್ರವರ ನಿರ್ದೇಶನವನ್ನು ಮಾಡಿ ವರನಿಗೆ ವಧುವನ್ನು ತಂದುಕೊಳ್ಳಲು ಹಿರಿಯರು ನಿಶ್ಚಯಿಸಿರುವುದಾಗಿ ತುಂಬಿದ ಸಭೆಯಲ್ಲಿ ಘೋಷಿಸುತ್ತಾರೆ. ನೆರೆದವರು ಅಡ್ಡಿಯಿಲ್ಲವೆಂದ ಮೇಲೆ ಮುಂದಿನ ಕಾರ್ಯ ನಡೆಯುತ್ತದೆ. ಇದು ಪಾಣಿಗ್ರಹಣ ಸಂಕಲ್ಪ ಎನಿಸಿಕೊಳ್ಳುತ್ತದೆ. ಇದನ್ನು ವಾಗ್ದಾನವೆಂದೂ ವ್ಯವಹರಿಸುತ್ತಾರೆ.

ಇವಕ್ಕೆ ಹೊಂದಿಕೊಂಡಂತೆ ವ್ಯವಸ್ಥಿತವಾದ ಕನ್ಯಾದಾನದಲ್ಲಿ ಹುಡುಗಿಯ ತಂದೆಯು ಧಾರಾಪೂರ್ವಕವಾಗಿ ಮಗಳನ್ನು ವರನಿಗೆ ದಾನ ಮಾಡುತ್ತಾನೆ. ದಾನ ಮಾಡುವಾಗ ತಂದೆಯು ಈ ಹುಡುಗಿಯನ್ನು ಮಗನಂತೆಯೇ ಸಾಕಿದ್ದೇನೆಂದು (ಪುತ್ರವತ್ ಪಾಲಿತಾ ಮಯಾ) ವರನಿಗೆ ಹೇಳಿ ಮುಂದೆ ಅವಳನ್ನು ಸರಿಯಾಗಿ ನೋಡಿಕೊಳ್ಳುವುದು ಅವನ ಹೊಣೆಯೆಂದು ತಿಳಿಸುತ್ತಾನೆ. ಈ ದಾನವನ್ನು ವರನು ಪರಿಗ್ರಹಿಸುವಾಗ "ನಿಮ್ಮ ಮಗಳನ್ನು ಧರ್ಮ ಪ್ರಸಂಗಗಳಲ್ಲಾಗಲೀ, ದುಡ್ಡಿನ ವಿಚಾರದಲ್ಲಾಗಲೀ, ಬಯಕೆಗಳನ್ನು ತೀರಿಸುವ ವಿಚಾರದಲ್ಲಾಗಲೀ ಬವಣೆಗೊಳಿಸುವುದಿಲ್ಲ (ಧರ್ಮೇ ಚ ಅರ್ಥೇ ಚ ಕಾಮೇ ಚ ನಾತಿಚರಾಮಿ) ಎಂದರೆ ಅವಳನ್ನು ಬಿಟ್ಟು ನಡೆಯುವುದಿಲ್ಲ" ಎಂದು ಹುಡುಗಿಯ ತಂದೆಗೆ ವಾಗ್ದಾನ ಮಾಡುತ್ತಾನೆ. ಇದಾದನಂತರ ಅಗ್ನಿಪರಿಣಯದ ಪಾಣಿಗ್ರಹಣ ವಿಧಿ ನಡೆಯುತ್ತದೆ.

**ಪಾಣಿಗ್ರಹಣ**

ವರನು ತನ್ನ ಬಲಭಾಗದಲ್ಲಿ ವಧುವನ್ನು ಕುಳ್ಳಿರಿಸಿಕೊಂಡು ಪ್ರಾಣಾಯಾಮವನ್ನು ಮಾಡಿ "ನಾವಿಬ್ಬರೂ ಧರ್ಮವನ್ನು ನಡೆಸಲು ನೆರವಾಗುವ ಔಪಾಸನಾಗ್ನಿಯನ್ನು ಹೊತ್ತಿಸುವುದರ ಮೂಲಕ ಕೈ ಹಿಡಿಯುವ ಹೋಮ (ಪಾಣಿಗ್ರಹಣ ಹೋಮ)ವನ್ನು ಮಾಡುತ್ತೇವೆ" ಎಂದು ಸಂಕಲ್ಪ ಮಾಡುತ್ತಾನೆ (ಮಮ ಸಹ ಧರ್ಮಚಾರಿಣೀ ಸಂಬಂಧ ಸಂಪಾದನೀಯಔಪಾಸನಾಗ್ನಿ ಪರಿಗ್ರಹಣದ್ವಾರಾ ಶ್ರೀ ಪರಮೇಶ್ವರ ಪ್ರೀತ್ಯರ್ಥಂ ಪಾಣಿಗ್ರಹಣ ಹೋಮಂ ಕರಿಷ್ಯೇ). ಅನಂತರ ಅಗ್ನಿಯನ್ನು ವಿಧಿವತ್ತಾಗಿ ಹೊತ್ತಿಸಿ ಒಂದು ಕಡೆ ದೃಷದ-ಸೋಪಲಗಳನ್ನೂ, ಇನ್ನೊಂದು ಕಡೆ ಧಾನ್ಯರಾಶಿಯ ಮೇಲೆ ಉದಕುಂಭವನ್ನೂ, ಮತ್ತೊಂದು ಕಡೆ

ಅಕ್ಕಿಯ ಸಣ್ಣ ಏಳು ರಾಶಿಗಳನ್ನೂ ಇಟ್ಟು, ವಿಧ್ಯುಕ್ತವಾಗಿ ಅಗ್ನಿಯನ್ನು ಆರಾಧಿಸಿ ತುಪ್ಪದಲ್ಲಿ ಅದ್ದಿದ ಅರಳನ್ನು ಹೋಮ ಮಾಡುತ್ತಾರೆ. ಪಾಣಿಗ್ರಹಣದ ಪ್ರಧಾನ ಹೋಮದಲ್ಲಿ ಈ ಮಂತ್ರವನ್ನು ವರನು ಹೇಳಬೇಕು. ದಂಪತಿಗಳು ಒಂದೇ ಮನಸ್ಸಿನವರಾಗಿರಲು ಅರ್ಯಮನ ಅನುಗ್ರಹವನ್ನು ಬೇಡುವುದು ಈ ಮಂತ್ರದ ತಾತ್ಪರ್ಯ—

ತ್ವಮರ್ಯಮಾ ಭವಸಿ ಯತ್ಕನೀನಾಂ ನಾಮ ಸ್ವಧಾವನ್ ಗುಹ್ಯಂ ಬಿಭರ್ಷಿ।
ಅಜಂತಿ ಮಿತ್ರಂ ಸುಧಿತಂ ನ ಗೋಭಿಃ ಯದ್ದಂಪತೀ ಸಮನಸಾ ಕೃಣೋಷಿ ॥

ಅನಂತರ ತಾನು ಪಶ್ಚಿಮಕ್ಕೂ ವಧುವು ಪೂರ್ವಕ್ಕೂ ಮುಖ ಮಾಡಿ, ತಾನು ನಿಂತಿದ್ದು ಕುಳಿತ ವಧುವಿನ ಕೈಯನ್ನು ಹಿಡಿದೆತ್ತಿ "ನೀನು ಗಂಡನಾದ ನನ್ನೊಂದಿಗೆ ಬಾಳಿ ಮುಪ್ಪನ್ನು ಮುಟ್ಟಲೆಂಬ ಸೌಭಾಗ್ಯಕ್ಕಾಗಿ ನಾನು ನಿನ್ನ ಕೈ ಹಿಡಿಯುತ್ತಿದ್ದೇನೆ. ನೀನು ನನ್ನ ಮನೆಯ ಮಡದಿಯೆಂದು ಭಗ, ಅರ್ಯಮ, ಸವಿತೃ ಮತ್ತು ಪುರಂಧಿ ಇವರು ನಿನ್ನನ್ನು ನನಗೆ ಒಪ್ಪಿಸಿದ್ದಾರೆ" ಎಂದು ಹೇಳುವುದೇ ಪಾಣಿಗ್ರಹಣದ ವಿಧಿ. ಈ ಮಂತ್ರ—

ಗೃಹ್ಣಾಮಿ ತೇ ಸೌಭಗತ್ವಾಯ ಹಸ್ತಂ ಮಯಾ ಪತ್ಯಾ ಜರದಷ್ಟಿರ್ಯಥಾಸಃ।
ಭಗೋ ಅರ್ಯಮಾ ಸವಿತಾ ಪುರಂಧಿಃ ಮಹ್ಯಂ ತ್ವಾದುರ್ಗಾರ್ಹಪತ್ಯಾಯ
ದೇವಾಃ॥

ಅನಂತರ ಕನ್ಯೆಯೂ ಅಗ್ನಿಯನ್ನು ಆರಾಧಿಸಿದ ಮೇಲೆ ಅರ್ಯಮನಿಗೆ, ವರುಣನಿಗೆ, ಪೂಷನಿಗೆ, ಪ್ರಜಾಪತಿಗೆ ಬೇರೆ ಬೇರೆಯಾಗಿ ಸ್ವಾಹಾಪೂರ್ವಕವಾದ ಆಜ್ಯಾಂಜಲಿಯ ಆರಾಧನೆ ನಡೆಯುತ್ತದೆ.

ಅಗ್ನಿಯ ಸಮ್ಮುಖದಲ್ಲಿ ನಿಂತು ವರನು ವಧುವನ್ನು ಕುರಿತು "ನಾನು ನೀನು ಇಬ್ಬರೂ ಮದುವೆಯಾಗೋಣ. ನಾನು

ನಾಕ, ನೀನು ಭೂಮಿ; ನಾನು ಸಾಮ, ನೀನು ಋಕ್. ನಾವಿಬ್ಬರೂ ಮಕ್ಕಳನ್ನು ಪಡೆಯೋಣ. ಪ್ರೀತಿಸುತ್ತಾ, ನಗುನಗುತ್ತಾ, ಒಳ್ಳೆಯ ಮನಸ್ಸಿನಿಂದ ನೂರು ವರ್ಷ ಬಾಳೋಣ" ಎಂದು ಹೇಳುತ್ತಾನೆ. ("ಅಮೋಹಮಸ್ಮಿ ಸಾತ್ವಂ; ಸಾತ್ವಮಸಿ ಅಮೋಹಂ; ದ್ಯೌರಹಂ ಪೃಥಿವೀ ತ್ವಂ; ಸಾಮಾಹಂ ಋಕ್ ತ್ವಂ; ತಾವೇಹ ವಿವಹಾವಹೈ. ಪ್ರಜಾಂ ಪ್ರಜನ, ಯಾವಹೈ; ಸಂ ಪ್ರಿಯೌ ರೋಚಿಷ್ಣೂ ಸುಮನಸ್ಯಮಾನೌ ಜೀವೇವ ಶರದಶ್ಶತಂ"). ಇದಾದ ಮೇಲೆ ಹುಡುಗಿಯು ಪೂರ್ವ ದಿಕ್ಕಿಗೆ ಮುಖ ಮಾಡಿ ಅಗ್ನಿಯ ಪಕ್ಕದಲ್ಲಿ ಇಟ್ಟ ದೃಷದ ಶಿಲೆಯನ್ನು ಎರಡೂ ಕಾಲುಗಳಿಂದ ತುಳಿಯುವ ಸಂಪ್ರದಾಯವೂ ಪ್ರಾಚೀನವಾದುದು. ಈ ಕಲ್ಲಿನಂತೆ ಆಕೆ ಸ್ಥಿರಳಾಗಬೇಕು, ವೈರಿಗಳನ್ನು ಗೆಲ್ಲಬೇಕು, ಶತ್ರುಗಳನ್ನು ತುಳಿಯಬೇಕು ಎಂಬುದು ಈ ವಿಧಿಯ ಆಶಯ (ಇಯಮಶ್ಮಾನಮಾರೋಹ ಅಶ್ಮೇವ ತ್ವಂ ಸ್ಥಿರಾ ಭವ; ಸಹಸ್ವ ಪೃತ ನಾಯತಃ, ಅಭಿತಿಷ್ಠ ಪೃತನ್ಯತಃ).

ಪಾಣಿಗ್ರಹಣವೇ ವಿವಾಹದ ಮುಖ್ಯ ವಿಧಿಯಾದುದರಿಂದ ಅದಕ್ಕಾಗಿ ನಿರ್ದಿಷ್ಟವಾದ ಲಗ್ನವನ್ನು, ಮುಹೂರ್ತವನ್ನು ಸಾಧಿಸಲೇಬೇಕೆಂಬ ನಂಬಿಕೆಯಿದೆ. ಇದಕ್ಕಾಗಿ ಹಿಂದಿನ ಕಾಲದಲ್ಲಿ ಪುರೋಹಿತರ ಪರಿಚಾರಕನೊಬ್ಬನು ಐದು ನಿಮಿಷಗಳಿಗೊಮ್ಮೆ ಕಂಚಿನ ಪಾತ್ರೆಯೊಂದನ್ನು ಕಡ್ಡಿಯಿಂದ ಹೊಡೆದು ವೇಳೆಯನ್ನು ಸೂಚಿಸುವ ಸಂಪ್ರದಾಯ ಇದ್ದಿತಂತೆ. ಈಗ ಪುರೋಹಿತರಿಗೂ ಕೈ ಗಡಿಯಾರವಿದ್ದು ಈ ವ್ಯವಸ್ಥೆಯ ಅಗತ್ಯವಿಲ್ಲವಾಗಿದೆ. ಈ ಸಮಯದಲ್ಲಿ ಹೇಳುವ 'ಮಂಗಳಾಷ್ಟಕ'ವು ಸ್ವಾರಸ್ಯವಾದ ಭಾಗ. ಪುರೋಹಿತರು "ವರವಧೂ ಸಾವಧಾನ" ಎಂಬ ಪಲ್ಲವಿಯಿಂದ ಈ ಎಂಟು ಸ್ವಸ್ತಿ ಪದ್ಯಗಳನ್ನು ರಾಗವಾಗಿ ಗಟ್ಟಿಯಾಗಿ ಹೇಳುತ್ತಾರೆ. ಮದುಮಕ್ಕಳಿಗೆ ಎಲ್ಲ ಸೌಭಾಗ್ಯವೂ ಒದಗ

ಲೆಂದು ಇಲ್ಲಿನ ಆಶಯ. ಪಾಣಿಗ್ರಹಣದ ಅವಧಿಯಲ್ಲಿ ವಧೂ ವರರೂ ಅವರ ತಂದೆತಾಯಿಯರೂ ಉಪವಾಸದಿಂದ ಇರ ಬೇಕೆಂಬ ನಿಯಮವುಂಟು. ಕನ್ಯಾದಾನ, ಮಾಂಗಲ್ಯಧಾರಣ ವಿರಡೂ ಪಾಣಿಗ್ರಹಣದ ಪ್ರಮುಖ ವಿವರಗಳು. ಇವು ಪ್ರಾಚೀನ ಪದ್ಧತಿಯಲ್ಲಿ ಸೇರಿರಲಿಲ್ಲವೆಂಬ ಮಾತು ಆಗಲೇ ಬಂದಿದೆ. ಪಾಣಿ ಗ್ರಹಣದ ವಿಧಿಗಳಲ್ಲೇ ಲಾಜಾ (ಅರಳು) ಹೋಮವೂ ಸೇರುತ್ತದೆ.

## ಸಪ್ತಪದಿ

ಧರ್ಮಶಾಸ್ತ್ರಗಳ ಪ್ರಕಾರ ವಿವಾಹದ ಪ್ರಧಾನ ಘಟ್ಟವೆಂದರೆ 'ಸಪ್ತಪದಿ' ಎನಿಸಿಕೊಳ್ಳುವ ವಿಧಿ. ಇದಾದನಂತರವೇ ವೈವಾಹಿಕ ಸಂಬಂಧವು ಸ್ಥಿರವಾಗುವುದೆಂದು ನಂಬಿಕೆ. ಪಾಣಿಗ್ರಹಣವಾಗಿ ಸಪ್ತಪದಿ ನಡೆಯುವ ಮುಂಚೆಯೇ ವರನು ಮೃತನಾದರೆ ಹುಡು ಗಿಗೆ ವೈಧವ್ಯ ಒದಗದೆಂದು ಹಲವು ಧರ್ಮಶಾಸ್ತ್ರಕಾರರ ಅಭಿ ಪ್ರಾಯ. ಬೇರೆ ಯಾವ ಕಾರಣಕ್ಕಾಗಲೀ ಸಪ್ತಪದಿ ನಡೆಯದಿದ್ದರೆ ಹುಡುಗಿಯನ್ನು ಬೇರೊಬ್ಬ ವರನಿಗೆ ಕೊಟ್ಟು ಮದುವೆ ಮಾಡಲು ಯಾವ ಅಡ್ಡಿಯೂ ಇಲ್ಲವೆಂದು. ಪಾಣಿಗ್ರಹಣವಾದರೂ ಹುಡುಗಿ ಅವಿವಾಹಿತಳೇ ಎಂದು ನಿರ್ಣಯಿಸಿರುವ ಸಂದರ್ಭಗಳುಂಟು. ಸಪ್ತಪದಿಯು ನಡೆದ ನಂತರ ವಿವಾಹವಿಚ್ಛೇದನಕ್ಕೆ ಧರ್ಮ ಶಾಸ್ತ್ರಗಳಲ್ಲಿ ಅವಕಾಶವಿರಲಿಲ್ಲ. 1955ರ ಹಿಂದೂ ವಿವಾಹ ಮಸೂದೆಯೇನೋ ಇಂಥ ಸಂದರ್ಭದಲ್ಲಿಯೂ ವಿವಾಹವಿಚ್ಛೇದ ಸಾಧ್ಯವೆಂದು ಎತ್ತಿಹಿಡಿದಿದೆ. ಅಂತೂ ಸಪ್ತಪದಿಯ ಪ್ರಾಶಸ್ತ್ಯವು ನಿರ್ವಿವಾದವಾದುದು, ಅಸಂದಿಗ್ಧವಾದುದು.

ವರನು ವಧುವಿನ ಕೈ ಹಿಡಿದುಕೊಂಡು ಅಗ್ನಿಗೆ ಉತ್ತರಾಭಿ ಮುಖವಾಗಿ ಕರೆದುಕೊಂಡು ಹೋಗಿ ಅಲ್ಲಿ ಅಕ್ಕಿಯ ಏಳು ರಾಶಿಗಳ ಮೇಲೆ ಅವಳನ್ನು ನಡೆಸುತ್ತಾನೆ. ಮೊದಲನೆಯ ಹೆಜ್ಜೆ

ಇಟ್ಟಾಗ "ಇಷ ಏಕಪದೀ ಭವ, ಸಾ ಮಾಮನುವ್ರತಾ ಭವ; ಪುತ್ರಾನ್ ವಿಂದಾವಹೈ; ತೇ ಸಂತು ಜರದಷ್ಟಯಃ॥" (ಮೊದಲನೆಯ ಹೆಜ್ಜೆಯನ್ನಿಟ್ಟು ಸಾಕುವವಳಾಗು, ನನ್ನ ವ್ರತಗಳೇ ನಿನ್ನ ವ್ರತಗಳಾಗಲಿ; ಮಕ್ಕಳನ್ನು ಪಡೆಯೋಣ, ಅವರೆಲ್ಲ ಮುದುಕರಾಗುವವರೆಗೆ ಬದುಕಿರಲಿ) ಎಂದು ಹೇಳುತ್ತಾನೆ. ಎರಡನೆಯ ಹೆಜ್ಜೆ ಇಟ್ಟು ಶಕ್ತಿವಂತಳಾಗು ( ಊರ್ಜೆ ದ್ವಿಪದೀ ಭವ). ಮೂರನೆಯ ಹೆಜ್ಜೆ ಇಟ್ಟು ಐಶ್ವರ್ಯ ವರ್ಧಕಳಾಗು (ರಾಯಸ್ಪೋಷಾಯ ತ್ರಿಪದೀ ಭವ), ನಾಲ್ಕನೆಯ ಹೆಜ್ಜೆ ಇಟ್ಟು ಆರೋಗ್ಯ ಸಾಧಕಳಾಗು (ಮಾಯೋಭವ್ಯಾಯ ಚತುಷ್ಪದೀ ಭವ). ಐದನೆಯ ಹೆಜ್ಜೆ ಇಟ್ಟು ಮಕ್ಕಳನ್ನು ಪಡೆ (ಪ್ರಜಾಭ್ಯಃ ಪಂಚಪದೀ ಭವ), ಆರನೆಯ ಹೆಜ್ಜೆ ಇಟ್ಟು ಋತುನಿಯಮಗಳನ್ನು ಕಾಪಿಡು (ಋತುಭ್ಯಃ ಷಟ್ ಪದೀ ಭವ), ಮತ್ತು ಏಳನೆಯ ಹೆಜ್ಜೆ ಇಟ್ಟು ನನ್ನ ಸ್ನೇಹಿತೆಯಾಗು(ಸಖಾ ಸಪ್ತಪದೀ ಭವ) ಎಂದು ವರನು ವಧುವನ್ನು ಕೇಳಿಕೊಳ್ಳುತ್ತಾನೆ. ಇದು ಸಪ್ತಪದಿಯೆನಿಸಿಕೊಳ್ಳುತ್ತದೆ.

ಸಪ್ತಪದಿಯಾದ ನಂತರ ವರನು ತನ್ನ ತಲೆಯನ್ನು ವಧುವಿನ ತಲೆಗೆ ತಾಗಿಸಿ, ಕಲಶದಲ್ಲಿರುವ ನೀರನ್ನು ಮೊದಲು ತನ್ನ ತಲೆಯ ಮೇಲೂ, ಅನಂತರ ವಧುವಿನ ತಲೆಯ ಮೇಲೂ ಪ್ರೋಕ್ಷಿಸುತ್ತಾನೆ. ಇಲ್ಲಿಗೆ ಪಾಣಿಗ್ರಹಣ ವಿಧಿಯು ಮುಗಿಯಿತು. ವರನು "ಅನೇನ ಪಾಣಿಗ್ರಹಣ ಹೋಮ ಕರ್ಮಣಾ ಶ್ರೀ ಯಜ್ಞೇಶ್ವರಃ ಸುಪ್ರೀತೋ ಸುಪ್ರಸನ್ನೋ ಭವತು" ಎಂದು ಬೇಡಿಕೊಂಡು ಏಳುತ್ತಾನೆ. ಈಗ ವಧೂವರರು ದಂಪತಿಗಳಾದರು. ಗಾರ್ಹಸ್ಪತ್ಯ ಜೀವನದಲ್ಲಿ ಭಾಗಿಗಳಾದರು. ಅವರ ಕೂಡಿಕೆಗೆ ಅಗ್ನಿಯೇ ಸಾಕ್ಷಿ. ವಿವಾಹಾಗ್ನಿಯನ್ನು ಯಾವಜ್ಜೀವವೂ ಆರದಂತೆ ರಕ್ಷಿಸಿಕೊಳ್ಳುವ ವಾಡಿಕೆ ಹಿಂದಿನ ಕಾಲದಲ್ಲಿದ್ದಿತು.

## ಗೃಹಪ್ರವೇಶ

ವಿವಾಹ ವಿಧಿಗಳಲ್ಲಿ ಮುಂದಿನದು ಗೃಹಪ್ರವೇಶ. ವಿವಾಹಾಗ್ನಿಯನ್ನು ಮುಂದಿಟ್ಟುಕೊಂಡು ವಧೂವರರು ಹೊಸ ಸಂಸಾರ ಹೂಡಲು ಮನೆಯನ್ನು ವ್ಯವಸ್ಥೆ ಮಾಡುವ ಉದ್ದೇಶ ಈ ವಿಧಿಯದು. ವಧುವು ಮನೆಯ ಯಜಮಾನಿಯೆಂದೂ, ಗಂಡನ ಮನೆಯಲ್ಲಿ ಆಕೆಯ ಶಾಸನವೇ ಪ್ರಮುಖವೆಂದೂ, ಈ ಸಂದರ್ಭದಲ್ಲಿ ಹೇಳುವ ಮಂತ್ರದ ಇಂಗಿತ. "ಪೂಷಾತ್ವೇತೋ ನಯತು ಹಸ್ತ ಗೃಹ್ಯಾಶ್ವಿನೌತ್ವಾ ಪ್ರವಹತಾಂ ರಥೇನ। ಗೃಹಾನ್ ಗಚ್ಛ ಗೃಹ ಪತ್ನೀ ಯಥಾऽಸೌ ವಶಿನೀತ್ವಂ ವಿದಥಮಾವದಾಸಿ॥" (ಪೂಷನು ನಿನ್ನ ಕೈ ಹಿಡಿದು ನಡೆಸಲಿ. ಅಶ್ವಿನೀ ದೇವತೆಗಳು ತಮ್ಮ ರಥದಲ್ಲಿ ನಿನ್ನನ್ನು ಒಯ್ಯಲಿ. ಮನೆಯ ಒಡತಿಯಾಗಲು ಮನೆಗೆ ತೆರಳು. ಅಲ್ಲಿ ಸೇರುವ ಜನರನ್ನು ನೀನೇ ನಿರ್ವಹಿಸು.) ಗೃಹಪ್ರವೇಶವಾದ ಮೇಲೆ ಅಂದು ರಾತ್ರಿ ಇಬ್ಬರೂ ಕೂಡಿ ಧ್ರುವ ನಕ್ಷತ್ರವನ್ನೂ, ಸಪ್ತಋಷಿಮಂಡಲವನ್ನೂ, ಅರುಂಧತಿ ನಕ್ಷತ್ರವನ್ನೂ ನೋಡಿ (ಅಥವಾ ನೋಡಲು ಯತ್ನಿಸಿ) "ಜೀವ ಪತ್ನೀ ಪ್ರಜಾಂ ವಿಂದೇಮ" ಎಂಬ ಮಂತ್ರವನ್ನು ಹೇಳಬೇಕೆಂಬ ವಿಧಿಯಿದೆ. ಅಲ್ಲಿಯವರೆಗೆ ವಧುವು ಮೌನದಲ್ಲಿದ್ದು "ನನ್ನ ಗಂಡ ಬಹುಕಾಲ ಬಾಳಲಿ, ನನಗೆ ಮಕ್ಕಳಾಗಲಿ" ಎಂಬರ್ಥದ ಈ ಮಂತ್ರವನ್ನು ಹೇಳಿಯೇ ಗಂಡನೊಂದಿಗೆ ಮಾತನಾಡಲು ಆರಂಭಿಸಬೇಕೆಂಬ ನಿಯಮವೂ ಒಂದು ಕಾಲಕ್ಕೆ ಇದ್ದಿತು.

ಹೊಸ ಮನೆಗೆ ಕಾಲಿಟ್ಟ ಒಡನೆಯೇ ವರನು ವಧುವಿನ ಕೈ ಹಿಡಿದು "ಸುಖವಾಗಿ ಬಾಳು, ಮಕ್ಕಳನ್ನು ಪಡೆ, ಎಚ್ಚರದಿಂದ ಈ ಮನೆಯನ್ನು ಆಳು" (ಇಹ ಪ್ರಿಯಂ ಪ್ರಜಯಾ ತೇ ಸಮೃಧ್ಯತಾಮಸ್ಮಿನ್ ಗೃಹೇ ಗಾರ್ಹಪತ್ಯಾಯ ಜಾಗೃಹಿ) ಎಂದು

ಹೇಳುತ್ತಾನೆ, ಅಥವಾ ಹೇಳಬೇಕು. ವಿವಾಹ ಮಂಟಪದಿಂದ ತಂದ ವಿವಾಹಾಗ್ನಿಯನ್ನು ಇಲ್ಲಿ ಪ್ರಜ್ವಲಿಸಿ ಪ್ರವೇಶ ಹೋಮವನ್ನು ಮಾಡುತ್ತಾರೆ. ಈ ಸಮಯದಲ್ಲಿ ವಧೂವರರಿಬ್ಬರೂ "ಪ್ರಜಾಪತಿಯು ನಮಗೆ ಮಕ್ಕಳನ್ನು ಕೊಡಲಿ. ಅರ್ಯಮನು ನಮ್ಮ ಮುಪ್ಪಿನವರೆಗೂ ನಮ್ಮನ್ನು ಕಾಪಾಡಲಿ. ಗಂಡನ ಮನೆಗೆ ಬಂದು ಮಂಗಳವನ್ನು ಮಾಡು. ನಮ್ಮ ಎಲ್ಲ ಜನರಿಗೂ ಪ್ರಾಣಿಗಳಿಗೂ ಒಳ್ಳೆಯದನ್ನು ಮಾಡು" (ಆ ನಃ ಪ್ರಜಾಂ ಜನಯತು ಪ್ರಜಾಪತಿರಾಜರಸಾಯ ಸಮನಕ್ತ್ವರ್ಯಮಾ । ಅದುರ್ಮಂಗಲೀಃ ಪತಿಲೋಕಮಾವಿಶ, ಶಂ ನೋ ಭವ ದ್ವಿಪದೇ ಶಂ ಚತುಷ್ಪದೇ॥) ಎಂಬ ಮಂತ್ರವನ್ನು ಪಠಿಸುತ್ತಾರೆ. ವಾಸ್ತವವಾಗಿ ಇದು ವರನು ವಧುವನ್ನು ಕುರಿತು ಹೇಳುವ ಮಾತು.

**ಗರ್ಭಾದಾನ**

ಪ್ರವೇಶ ಹೋಮ ಮುಗಿದ ಮೇಲೆ ಮೂರು ರಾತ್ರಿಗಳನ್ನು ಅವರು ಬ್ರಹ್ಮಚಾರಿಗಳಂತೆಯೇ ಕಳೆದು, ಅಲಂಕರಿಸಿಕೊಂಡು ನೆಲದ ಮೇಲೆಯೇ ಮಲಗುತ್ತ, ಹುಳಿ ಉಪ್ಪುಗಳನ್ನು ಬಿಟ್ಟ ಆಹಾರಗಳನ್ನು ಉಂಡು, ನಾಲ್ಕನೆಯ ರಾತ್ರಿ ಗರ್ಭಾದಾನವನ್ನು ಮಾಡಬೇಕೆಂದು ವೈದಿಕ ವಿಧಿ. ಈ ಮೂರು ರಾತ್ರಿಗಳನ್ನು ವ್ರತವೆಂದು ವ್ಯವಹರಿಸುತ್ತಿದ್ದರು. ಇದು ವೈವಾಹಿಕ ಸಂಸ್ಕಾರದ ಅಂತಿಮ ಘಟ್ಟ. ಆದರೆ ಈ ಕಾಲಕ್ಕೆ ವ್ರತವೆಂಬುದು ಇಲ್ಲವಷ್ಟೆ. ಮದುವೆ ನಡೆದ ಮೇಲೆ ಅನುಕೂಲವಾದ ಒಂದು ದಿನ ನೋಡಿ ನಿಷೇಕ ಪ್ರಸ್ತದ ಶಾಸ್ತ್ರ ಮಾಡುತ್ತಾರೆ. ಬಹುಮಟ್ಟಿಗೆ ಈಗ ಈ ಶಾಸ್ತ್ರವೂ ನಡೆಯುವುದಿಲ್ಲ.

ಮೊದಲಿಗೆ ಮದುವೆಯೆಂದರೆ ಒಂದು ವಾರದ ಉತ್ಸವವಾಗಿದ್ದಿತು. ಬರುಬರುತ್ತ ಮೂರು ದಿನಗಳಿಗೆ ಈ ಅವಧಿ

ಇಳಿಯಿತು. ಮೊದಲನೆಯ ದಿನ ದೇವರ ಸಮಾರಾಧನೆ, ವರ ಪೂಜೆ, ಜಾನವಾಸಗಳೂ, ಎರಡನೆಯ ದಿನ ಕಾಶೀ ಯಾತ್ರೆ, ಕನ್ಯಾದಾನ, ಪಾಣಿಗ್ರಹಣ, ಲಾಜಾಹೋಮ ಸಪ್ತಪದಿಗಳೂ, ಮೂರನೆಯ ದಿನ ನಾಗೋಲಿ, ಗೃಹಪ್ರವೇಶ, ಮನೆ ತುಂಬಿಸಿ ಕೊಳ್ಳುವುದು ಈ ವಿಧಿಗಳೂ ನಡೆಯುವ ವಾಡಿಕೆ ಬಂದಿತು. ಈಗ ಸಾಮಾನ್ಯವಾಗಿ ವಿದ್ಯಾವಂತರಾದವರೂ ಅನುಕೂಲವಿಲ್ಲ ದವರೂ ಎಲ್ಲ ವಿಧಿಗಳನ್ನೂ ಹೆಚ್ಚೆಂದರೆ ಎರಡು ದಿನಗಳಲ್ಲಿ ಅಡಕ ಮಾಡುತ್ತಾರೆ. ಬಹುಮಟ್ಟಿಗೆ ಒಂದೇ ದಿನದಲ್ಲಿ ಮುಖ್ಯ ವಿಧಿಗಳೆಲ್ಲ ಮುಗಿಯುತ್ತವೆ.

## 5. ಪ್ರಾಚೀನ ಕಾಲದ ವಿಚಿತ್ರ ಪದ್ಧತಿಗಳು

ಮಾನವನ ಇತಿಹಾಸದಲ್ಲಿ ಸಂಸ್ಕೃತಿಯ ಪ್ರಭಾವ ಮೂಡಿ ಬಂದುದು ಖಂಡ ಖಂಡವಾಗಿ. ಎಲ್ಲ ದೇಶಗಳಲ್ಲಿಯೂ ಎಲ್ಲ ಜನರಲ್ಲಿಯೂ ಒಮ್ಮೆಲೇ ಒದಗಿ ಬರಲಿಲ್ಲ. ಹಲವಾರು ದೇಶಗಳಲ್ಲಿ ಪ್ರಗತಿಪರರಾದ ಪಂಗಡಗಳು ಸಂಸ್ಕೃತಿ ವಿಕಾಸವನ್ನು ತಮ್ಮ ವ್ಯವಹಾರದಲ್ಲಿ ಅಳವಡಿಸಿಕೊಂಡಾಗ ಈ ಪ್ರಭಾವವನ್ನು ನಿರ್ಲಕ್ಷಿಸಿ ಅಥವಾ ವಿರೋಧಿಸಿ ಪ್ರಾಚೀನ ಪದ್ಧತಿಗಳು ಅಲ್ಲಲ್ಲಿ ಉಳಿದೇ ಉಳಿದುವು. ಇಡೀ ಜನಾಂಗಗಳು ಈ ಸಂಸ್ಕೃತಿ ವಿಕಾಸದ ವಲಯದಿಂದ ಹೊರಗಾದುವು. ಅವರ ನಡೆ ನುಡಿ, ಬಾಳುಬಯಕೆ, ವ್ಯಾಪಾರ ವ್ಯವಹಾರ, ಧರ್ಮಕರ್ಮಗಳು ಸಾಧ್ಯವಾದ ಮಟ್ಟಿಗೆ ವಿಕಾರವಿಲ್ಲದೆ ಅವ್ಯಾಹತವಾಗಿ ಉಳಿದುವು. ಸಂಸ್ಕೃತಿಯ ನೆಲೆಯ ದೃಷ್ಟಿಯಿಂದ ಹಿಂದುಳಿದ ಇಂಥ ಜನರನ್ನು ಆದಿವಾಸಿಗಳೆಂದು ವ್ಯವಹರಿಸುವುದುಂಟು. ನಮ್ಮ ದೇಶದ ಪ್ರತಿಯೊಂದು ಪ್ರಾಂತ್ಯದಲ್ಲಿಯೂ ಹತ್ತಾರು ವಿಭಿನ್ನ ಆದಿವಾಸಿ ಜನಾಂಗಗಳಿವೆ.

### ಅನುಕೂಲ ವ್ಯವಹಾರ

1951ರಲ್ಲಿ ನಡೆಸಿದ ಜನಗಣಸೆಯಲ್ಲಿ ಭಾರತದ 35,68,79,394ಜನರಲ್ಲಿ 1,91,11,498 ಮಂದಿ ಆದಿವಾಸಿಗಳಿದ್ದರು. ಹಿಮಾಲಯದ ಪರಿಸರದಲ್ಲಿ ಗುರುಂಗರು, ಲಿಂಬು, ಲೆಪ್ಚ, ಮಿಷ್ಮಿ, ಗರೋ, ನಾಗ, ಕುಕಿ—ಲುಶೈ, ಸಿಂಗ್ಪೋ, ಅಬೋರ್—ಮಿರಿ ಮುಂತಾದ ಪಂಗಡಗಳೂ ಮಧ್ಯ ಭಾರತದಲ್ಲಿ ಸಂತಾಲ, ಮುಂಡ, ಹೋ, ಭೂಮಿಜ, ಖರಿಯ, ಜುವಾಂಗ್,

ಗೋಂಡ, ಭಿಲ್ಲ, ಬೈಗ, ಕೋಲಿ, ಘುಯ್ಯ್ಯನ್ ಮುಂತಾದ ಪಂಗಡ ಗಳೂ, ದಕ್ಷಿಣದಲ್ಲಿ ಚೆಂಚು, ಕೋಟ, ಕುರುಂಬ, ಬಡಗ, ತೋಡ ಮತ್ತು ಕೇರಳದ ಮುತ್ತುವನ್, ಊರಳಿ, ಕನಿಕ್ಕರ್ ಮುಂತಾದ ಪಂಗಡಗಳೂ ಪ್ರಮುಖ ಆದಿವಾಸಿಗಳು.

ಇವರಲ್ಲಿ ಬಹುಮಟ್ಟಿಗೆ ಆರ್ಯೀಕೃತವಾದ ಸಂಪ್ರದಾಯ ಗಳಾಗಲೀ, ಸಮಾಜ ವ್ಯವಸ್ಥೆಯಾಗಲೀ, ಧಾರ್ಮಿಕ ಪ್ರಕ್ರಿಯೆ ಗಳಾಗಲೀ ಸೇರಿಬಂದಿಲ್ಲ. ಒಂದೊಂದು ಗುಂಪಿಗೂ ವಿಶಿಷ್ಟವಾದ, ಹಿಂದಿನಿಂದ ಬಂದ, ಪದ್ಧತಿಗಳನ್ನೇ ತಪ್ಪದೆ ಉಳಿಸಿಕೊಂಡು ಬರುವ ಕಟ್ಟಳೆ ಇದೆ. ಇದು ವಿವಾಹದ ವಿಚಾರದಲ್ಲಿ ಸ್ಪಷ್ಟವಾಗುತ್ತದೆ. ಇವರ ಪಾಲಿಗೆ ವಿವಾಹವು ಅನುಕೂಲ ವ್ಯವಹಾರ; ಲೈಂಗಿಕ ಕ್ರಿಯೆಯೇ ಅದರ ಮುಖ್ಯ ಪ್ರಯೋಜನ. ಇದರಲ್ಲಿ ಧರ್ಮದ ಪಾತ್ರ ಸಣ್ಣದು, ಇಲ್ಲವೆಂದರೂ ಸರಿಯೇ. ವಿವಾಹ ವಿಧಿಗಳೂ ಸರಳ, ವಿವಾಹ ವಿಚ್ಛೇದವೂ ಸುಲಭ. ಸಾಮಾನ್ಯವಾದ ಈ ವಿವರಗಳ ಹಿನ್ನೆಲೆಯನ್ನು ಅವಲಂಬಿಸಿ ಸಂಪ್ರದಾಯಭೇದ ವ್ಯೈದಳೆದಿದೆ. ಈಚೆಗೆ ಸಂಸ್ಕೃತಿಯ ಸಂಪರ್ಕದಿಂದಾಗಿ, ಕ್ರೈಸ್ತ ಪಾದ್ರಿಗಳ ಪ್ರಚಾರದಿಂದಾಗಿ ಈ ಆದಿವಾಸಿಗಳು ಹಳೆಯ ಪದ್ಧತಿ ಗಳನ್ನು ಅಷ್ಟಿಷ್ಟು, ಅಲ್ಲಲ್ಲಿ, ಬಿಡುತ್ತಿದ್ದಾರೆ. ಆಚಾರ ವ್ಯವಹಾರ ದಲ್ಲಿ, ಉಡಿಗೆ ತೊಡಿಗೆಗಳಲ್ಲಿ ಆಧುನಿಕ ಸಂಸ್ಕೃತಿಯ ಪ್ರಭಾವ ಕಾಣದೆ ಇರದು. ಆದರೂ ಪ್ರಾಚೀನ ಜಾಡಿನಲ್ಲೇ ಹೊಸ ಭಾವನೆಗಳನ್ನು ಮೂಡಿಸಿಕೊಳ್ಳುವುದೂ ಎಲ್ಲರಲ್ಲಿದ್ದಂತೆಯೇ ಆದಿವಾಸಿಗಳಲ್ಲೂ ಕಾಣಬರುತ್ತದೆ. ಈ ಪ್ರಾಚೀನ ಅರ್ವಾಚೀನ ಗಳ ಸಂಗಮ ವಿಚಿತ್ರವಾಗಿ ಸ್ವಾರಸ್ಯವಾಗಿ ಪರಿಣಮಿಸುತ್ತದೆ.

**ಕನ್ಯಾಪಹರಣ**

ಆದಿವಾಸಿ ಜನರಲ್ಲೆಲ್ಲ ತುಂಬ ಬಳಕೆಯಲ್ಲಿರುವ ವಿವಾಹ ಪದ್ಧತಿ

ಯೆಂದರೆ ಬಲಾತ್ಕಾರದಿಂದ ಹುಡುಗಿಯನ್ನು ತರುವ ಪದ್ಧತಿ. ತಮಗೆ ಒಪ್ಪಿದ ಹುಡುಗಿಯನ್ನು ಅವಳ ಗುಂಪಿನಿಂದ, ಅವಳ ಮನೆಯಿಂದ ಬಲಪ್ರಯೋಗ ಮಾಡಿ ಎಳೆದು ತರುವುದು. ಕದ್ದು ತರುವುದು ಎಲ್ಲ ದೇಶಗಳಲ್ಲಿಯೂ ಒಂದು ಕಾಲಕ್ಕೆ ಪ್ರಚಲಿತ ವಾಗಿದ್ದ ಪದ್ಧತಿಯೇ. ಹೀಗೆ ಬಲಪ್ರಯೋಗ ಮಾಡುವಾಗ ಹುಡುಗಿಯ ಕಡೆಯವರನ್ನು ಹಿಂಸಿಸುವುದು. ಸಮರದಲ್ಲಿ ಸೋಲಿ ಸುವುದು, ಕೊಲ್ಲುವುದು ನಡೆಯುತ್ತಿದ್ದ ವಿವರಗಳು. ಕದ್ದು ತಂದ ಹುಡುಗಿಗೆ ವರಣದ ಸ್ವಾತಂತ್ರ್ಯವಿರದು.

ಸಂತಾಲರಲ್ಲಿ, ಭೂಮಿಜರಲ್ಲಿ, ಮುಂಡರಲ್ಲಿ, ಕೊಲ್ಹಾನದ ಹೋ ಜನರಲ್ಲಿ, ಚೋಟಾ ನಾಗಪುರದ ಗಿರಿಜನರಲ್ಲಿ ಈ ಪದ್ಧತಿ ಇಂದಿಗೂ ವಿಶೇಷವಾಗಿ ಬಳಕೆಯಲ್ಲಿದೆ. ಕೇರಳದ ಮುತ್ತುವನ್ ಮತ್ತು ಮನ್ನನ್ ಜನರಲ್ಲಿಯೂ ಈ ಪದ್ಧತಿಯ ಅವಶೇಷ ಕಾಣಿಸುತ್ತದೆ. ಮುತ್ತುವನ್ ಕಾಡುಜನರಲ್ಲಿ ಹರೆಯದ ಹುಡು ಗಿಯು ನೀರು ತರಲು ಅಥವಾ ಸೌದೆ ತರಲು ತನ್ನ (ಎಂದರೆ ತನ್ನ ತಾಯಿಯ) ಮನೆಯಿಂದ ದೂರ ಹೋಗಿದ್ದಾಗ ಯಾರಾದರೊಬ್ಬ ತರುಣನು ಅವಳನ್ನು ಅಪಹರಿಸಿ ಕಾಡಿನಲ್ಲಿ ಗುಟ್ಟಾಗಿ ಅವಳೊಂದಿಗೆ ಕೆಲವು ದಿನಗಳನ್ನು ಕಳೆಯುತ್ತಾನೆ. ಹುಡುಗಿಯ ಕಡೆಯವರು ಇವರನ್ನು ಹುಡುಕಿ ಊರಿಗೆ ಹಿಂದಕ್ಕೆ ಕರೆತರುತ್ತಾರೆ; ಹುಡುಗನು ಮಾಡಿದ್ದು ತಪ್ಪೆಂದು ಪಂಗಡದ ಪಂಚಾಯತಿ ನಿರ್ಧರಿಸುತ್ತದೆ; ಆದರೆ ಹುಡುಗನ ಜತೆಯಲ್ಲಿ ಈ ಹುಡುಗಿಯು ಮುಂದೆಯೂ ಬಾಳಬೇಕೆಂದು ವಿಧಿಸುತ್ತದೆ!

## ಸ್ವಾರಸ್ಯ

ಬಹುಮಟ್ಟಿಗೆ ಹುಡುಗಿಯ ಒಪ್ಪಿಗೆಯಿಂದಲೇ ಈ ಅಪಹರ ಣದ ನಾಟಕ ನಡೆಯುತ್ತದೆ. ಹತ್ತು ಹನ್ನೆರಡು ದಿನಗಳ ಕಾಲ

ಇಬ್ಬರೂ ಕಾಡಿನಲ್ಲಿ ರಹಸ್ಯವಾಗಿ ವಿಹರಿಸಬೇಕೆಂಬ ನಿಯಮವೂ ಇರುವುದು ಸ್ವಾರಸ್ಯವಾಗಿದೆ. ಸಂತಾಲ, ಮುಂಡ, ಹೋ ಮುಂತಾದ ಜನಾಂಗಗಳಲ್ಲಿ ಹುಡುಗಿಯ ತಂದೆತಾಯಿಯರೇ ಹುಡುಗಿಯ ಮದುವೆಯನ್ನು ನಿಶ್ಚಯಿಸಿ ಗೊತ್ತುಮಾಡಿದ ವರನು ತಮ್ಮ ಮಗಳನ್ನು ಅಪಹರಿಸಿಕೊಂಡು ಹೋಗುವಂತೆ ಅವನನ್ನು ಬೇಡಿಕೊಳ್ಳುತ್ತಾರೆ. ಅಪಹೃತಳಾಗದೆ ಮದುವೆಯಾದ ಹುಡುಗಿಯು ಉತ್ತಮಳಲ್ಲವೆಂಬ ಕಲ್ಪನೆ ಅವರಲ್ಲಿದೆ. ಅವಳ ಅಪಹರಣವು ತಂದೆ ತಾಯಿಯರ ಘನತೆಯ ದ್ಯೋತಕ, ಗೌರವಕ್ಕೆ ಸಾಧಕ. ಹುಡುಗಿಯನ್ನು ವರನು ಕದ್ದೊಯ್ಯುವಾಗ ಹುಡುಗಿಯು ಪ್ರತಿಭಟಿಸುವ ನಾಟಕವನ್ನು ವಿಧಿವತ್ತಾಗಿ ಮಾಡುತ್ತಾಳೆ, ಅಳುತ್ತಾಳೆ, ಕೂಗುತ್ತಾಳೆ, ಅನಂತರ ಸಂತೋಷದಿಂದ ಅವನ ವಶಳಾಗುತ್ತಾಳೆ. ಕಾಡಿಗೆ ಓಡಿದ ಇಬ್ಬರನ್ನೂ ಊರ ಜನ ಹಿಡಿದು ತಂದು ಅವರನ್ನು ದಂಡಿಸಿ, ಶಾಸ್ತ್ರೋಕ್ತವಾಗಿ ಒಂದುಗೂಡಿಸುತ್ತಾರೆ! ಅವರು ಓಡಿ ಹೋಗುವ ವೇಳೆ, ಕಾಡಿನಲ್ಲಿ ಇರುವ ಸ್ಥಳ ಎಲ್ಲವೂ ಊರಿನವರಿಗೆಲ್ಲಾ ಮೊದಲೇ ತಿಳಿದಿರುತ್ತದೆ. ಈ ಪದ್ಧತಿಯ ಪ್ರಭೇದಗಳು ಮಧ್ಯ ಭಾರತದ ಗೋಂಡ ಜನರಲ್ಲಿಯೂ, ವೈನಾಡಿನ ಮುಲ್ಲರುಂಬ ರೆಂಬ ಕಾಡು ಜನರಲ್ಲಿಯೂ, ಉತ್ತರ ಆರ್ಕಾಟ್ ಜಿಲ್ಲೆಯ ಮಲೆಯಾಳಿ ಜನರಲ್ಲಿಯೂ ಕಾಣುತ್ತವೆ. ಆಧುನಿಕ ಭಾವನೆಗಳು ಈ ಪದ್ಧತಿಯಲ್ಲಿ ಹಲವು ವಿಕಾರಗಳನ್ನು ಒದಗಿಸಿವೆ.

### ಶ್ವಶುರ ಸೇವೆ

ಮಣಿಪುರದ ಪುರವಮ್ ಎಂಬ ಆದಿವಾಸಿಗಳಲ್ಲೂ, ರಂಗ್ ಖೋಲ್ ಕುಕಿಯೋ, ಐಮೋಲ್, ಅನಲ್, ಛಿರು ಮುಂತಾದ ಉತ್ತರ ದೇಶದ ಜನರಲ್ಲೂ ತಿರುವಾಂಕೂರು ಬಳಿಯಿರುವ ಪಲಿ

ಯನ್ ಮತ್ತು ಮನ್ನಾನ್ ಈ ಜನರಲ್ಲೂ ಇನ್ನೊಂದು ವಿಚಿತ್ರ ಪದ್ಧತಿ ಬಳಕೆಯಲ್ಲಿದೆ. ವರನು ತಾನು ಕೈ ಹಿಡಿಯುವ ಹುಡುಗಿಯ ಮನೆಯಲ್ಲಿ ಕೆಲವಾರು ತಿಂಗಳುಗಳು ಊಳಿಗವಾಡಿ ಅವಳ ತಂದೆ ತಾಯಿಯರನ್ನು ತೃಪ್ತಿ ಪಡಿಸುವುದು ಈ ಪದ್ಧತಿ. ಉತ್ತರ ದೇಶದ ಆದಿವಾಸಿಗಳಲ್ಲಿ ಈ ಊಳಿಗದ ಅವಧಿ ಮೂರು ವರ್ಷಗಳು ಇರುವುದುಂಟು. ಕೇರಳದ ಕಾಡು ಜನರಲ್ಲಿ ಆರು ತಿಂಗಳು, ಹೆಚ್ಚೆಂದರೆ ಒಂದು ವರ್ಷ. ಈ ಪದ್ಧತಿಯ ಮೂಲ ಅಸ್ಪಷ್ಟ ವಾಗಿದೆ. ಕನ್ಯಾ ವಿಕ್ರಯ ಪದ್ಧತಿಯ ಛಾಯೆ ಇಲ್ಲಿ ಕಾಣುವುದೆಂದು ಹೇಳುತ್ತಾರೆ. ವಧುವನ್ನು ಕೊಳ್ಳುವಷ್ಟು ಧನ ಸೌಕರ್ಯ ಇಲ್ಲದ ವರನು ಹೀಗೆ ಮಾವನ ಮನೆಯಲ್ಲಿ ಜೀತಮಾಡಿ, ಮಾವನು ಅಪೇಕ್ಷೆ ಪಟ್ಟಷ್ಟು ಸೇವೆಯನ್ನು ಧನಕ್ಕೆ ಪರ್ಯಾಯವಾಗಿ ಸಲ್ಲಿಸುವುದು ಇಲ್ಲಿನ ಮುಖ್ಯ ವಿವರವೆಂದು ಒಂದು ವಾದ. ಹಳೆಯ ಕಾಲದಲ್ಲಿ ಕೇಳಿದವರಿಗೆ ಮಗಳನ್ನು ಕೊಡುವ ಮನೋ ಧರ್ಮ ಇರಲಿಲ್ಲವಷ್ಟೆ.

ಇದಲ್ಲದೆ, ಯಾರಿಗೋ ಅಪಚರಿತರಿಗೆ ಮಗಳನ್ನು ಮದುವೆ ಮಾಡಿಕೊಡಲು ತಂದೆ ತಾಯಿಯರು ಹಿಂಜರಿಯುತ್ತಿದ್ದುದು ಸಹಜವೇ. ತಮ್ಮ ಮನೆಯಲ್ಲೇ ಸಾಕಷ್ಟು ದಿನಗಳು ಇದ್ದು ತನ್ನ ನಡತೆಯಿಂದ, ಕೌಶಲದಿಂದ, ಉತ್ಸಾಹದಿಂದ,. ವೀರ್ಯದಿಂದ ತಮ್ಮನ್ನು ಮೆಚ್ಚಿಸಬೇಕೆಂದು ಅವರು ಬಯಸುತ್ತಿದ್ದರೆ ಆಶ್ಚರ್ಯ ವೇನಲ್ಲ. ಊಳಿಗದ ಅವಧಿಯಲ್ಲಿ ಅವನನ್ನು ಪರೀಕ್ಷೆ ಮಾಡುವ ಅವಕಾಶ ಅವರಿಗೆ ಇರುತ್ತಿದ್ದಿತು.

ಕ್ರಿಯಾಶೀಲವಾದ ಪ್ರಾಚೀನ ಜನಾಂಗಗಳಲ್ಲಿ ಸೇವೆಗೆ ಈಗಿ ನಂತೆ ಹೀನಾಯದ ಅರ್ಥ ಇಲ್ಲದೆ ಪ್ರಾಶಸ್ತ್ಯವಿದ್ದಿತು. ಮಾವನ ಮನೆಯಲ್ಲಿ ದುಡಿದು ಮೆಚ್ಚಿಕೆಯನ್ನು ಗಳಿಸುವುದು ಅಳಿಯನಿಗೆ

ಪದ್ಧತಿಯು ಮಾತ್ರಾಗಿದ್ದಿತು. ಅಳಿಯ ದೇವರಿಗೆ ಮಾವನು ಉಪಚಾರ ಮಾಡುವುದೂ, ಅತ್ತೆ ಸತ್ಕಾರ ಮಾಡುವುದೂ ಈಚೆಗೆ ಬಂದ ಪದ್ಧತಿ. ಕನ್ಯೆಯರನ್ನು ಹೊರಕ್ಕೆ ಸಾಗಿಸುವುದೇ ಮುಖ್ಯ ಉದ್ದೇಶವಾಗಿ, ಅನುರೂಪನಾದ ವರನು ದುರ್ಲಭವಾದರೆ ಈ ಪದ್ಧತಿ ಒದಗುವುದು ಸಹಜವೇ. ವರಪೂಜೆ ಮಾಡಿ ಕಿರಿಯನಾದ ಅಳಿಯನ ಕೈ ಕಾಲು ತೊಳೆಯುವ ಮಾವನಿಗೆ ಹಳೆಯ ಸಮಾಜ ವ್ಯವಸ್ಥೆಯಲ್ಲಿ ಮರ್ಯಾದೆ ಇರುತ್ತಿರಲಿಲ್ಲ. ಅಳಿಯನನ್ನೂ ಮಗನಂತೆ ಬಗೆದು ಅದಕ್ಕೆ ತಕ್ಕಂತೆ ಅವನ ವಿಚಾರದಲ್ಲಿ ವರ್ತಿಸುವ ಮಾವಂದಿರು ಸುಸಂಸ್ಕೃತ ಸಮಾಜದಲ್ಲಿಯೂ ಎರಡು ಮೂರು ತಲೆಮಾರುಗಳ ಹಿಂದೆ ಇರುತ್ತಿದ್ದರು. ಹುಡುಗಿಯ ಪ್ರೀತಿಯನ್ನು ಪಡೆಯುವ ಮುನ್ನ ಮಾವನ ಮೆಚ್ಚಿಗೆ ಗಳಿಸಲು ಕಾತರರಾದ ಅಳಿಯಂದಿರೂ ಇರುತ್ತಿದ್ದರು.

ಹೀಗೆ ಊಳಿಗದಿಂದ ಹುಡುಗಿಯನ್ನು ಪಡೆಯುವ ಪದ್ಧತಿಯು ಜಪಾನಿನ ಐನೋ ಎಂಬ ಕಾಡು ಜನರಲ್ಲಿಯೂ, ಎಸ್ಕಿಮೋ ಜನರಲ್ಲಿಯೂ, ಉತ್ತರ ಅಮೆರಿಕಾದ ಆದಿವಾಸಿಗಳಲ್ಲಿಯೂ, ಆಫ್ರಿಕಾ ಖಂಡದ ಹಲವಾರು ಪಂಗಡಗಳಲ್ಲಿಯೂ ಇಂದಿಗೂ ಬಳಕೆಯಲ್ಲಿದೆ.

## ಕನ್ಯಾ ವಿಕ್ರಯ

ವಿವಾಹ ಸಂಬಂಧದಲ್ಲಿ ವಧುವಿನ ಹಿರಿಮೆಯನ್ನೇ ಎತ್ತಿ ಹಿಡಿದು ಹಲವಾರು ಪದ್ಧತಿಗಳು ಪ್ರಾಚೀನ ಕಾಲದಲ್ಲಿ ಪ್ರಚಲಿತ ವಾಗಿದ್ದುವು. ಇವು ಇಂದಿಗೂ ಆದಿವಾಸಿ ಜನರಲ್ಲಿ ಉಳಿದು ಬಂದಿದೆ. ವರ ದಕ್ಷಿಣೆಯನ್ನು ವರನ ಕಡೆಯವರಿಗೆ ಕೊಟ್ಟು ಅವರನ್ನು ಒಪ್ಪಿಸಿ ನಿಶ್ಚಿತಾರ್ಥ ಮಾಡುವ ಸಂಪ್ರದಾಯ ನಮ್ಮಲ್ಲಿ ಮೊನ್ನೆಮೊನ್ನೆಯವರೆಗೂ ಇದ್ದಿತಷ್ಟೆ. ಕನ್ನಡ ದೇಶ

ದಲ್ಲಿಯೂ ತಮಿಳು ನಾಡಿನಲ್ಲಿಯೂ ಈ ವರದಕ್ಷಿಣೆಯ ಹಾವಳಿ ವಿಪರೀತವಾಗಿ ಅಳಿಯನಿಂದ ಮನೆ ತೊಳೆದು ಹೋಗುವುದೆಂಬ ನಾಣ್ನುಡಿಯೂ ಪ್ರೈದಳೆಯಿತು. ಸುದೈವದಿಂದ ವಿದ್ಯಾವಂತ ರಾದ ಸುಸಂಸ್ಕೃತರಾದ ತರುಣರು ಈ ಪದ್ಧತಿಯ ಹಿಡಿತ ವನ್ನು ಸಡಿಲಿಸುತ್ತಿದ್ದಾರೆ. ಇದಕ್ಕೆ ವಿಪರೀತವಾಗಿ ಹುಡುಗಿಯನ್ನೇ ಕೊಳ್ಳಬೇಕೆಂಬ ಮನೋಧರ್ಮ ಹಲವಾರು ಪ್ರಾಚೀನ ಜನಾಂಗ ಗಳಲ್ಲಿ ಕಾಣುತ್ತದೆ. ನಮ್ಮಲ್ಲಿಯೂ ಬೇಸಾಯ ಮಾಡುವ ಪಂಗಡ ಗಳಲ್ಲಿ, ಉತ್ತರ ದೇಶದ ಉದ್ಯಮ ಶೀಲ ಪಂಗಡಗಳಲ್ಲಿ ಇದೇ ಪದ್ಧತಿಯಿದೆ. ಮದುವೆಗೆ ಒಪ್ಪಿಕೊಂಡ ವರನು ಮದುವೆಯ ಖರ್ಚನ್ನು ಮಾವನಿಗೆ ಕೊಡಬೇಕೆಂಬ ನಿಯಮವೂ ಅಲ್ಲಲ್ಲಿ ಕಾಣುತ್ತದೆ.

ಮನೆಯಲ್ಲಿ ಕೆಲಸಕ್ಕೆ ನೆರವಾಗುತ್ತಿದ್ದ ಹುಡುಗಿಯನ್ನು ಮದುವೆ ಮಾಡಿ ಕಳುಹಿಸಲು ಒಪ್ಪದ ತಂದೆತಾಯಿಯರು ಈಗಲೂ ಇದ್ದಾರಷ್ಟೆ. ಹಿಂದಿನ ಕಾಲದಲ್ಲಿ ಈ ಮನೋಧರ್ಮ ಪ್ರಮುಖ ವಾಗಿದ್ದು, ತಪ್ಪಿದ ನೆರವಿಗೆ ತಕ್ಕ ಪರಿಹಾರವನ್ನು ಧನರೂಪದಲ್ಲಿ ಮಾವನಿಗೆ ಸಲ್ಲಿಸಬೇಕೆಂಬ ವಿಧಿಯಿದ್ದಿತು. ಹೀಗೆ ಮಾವನಿಗೆ ಹಣದ ಆಶೆ ತೋರಿಸದಿದ್ದರೆ ಹುಡುಗಿ ಕೈ ಸೇರುವ ಹಾಗಿರಲಿಲ್ಲ. ಆದರೆ ಈ ವ್ಯಾಪಾರ ಮನೋಧರ್ಮವೇ ಕನ್ಯಾವಿಕ್ರಯ ಪದ್ಧತಿಯ ಮೂಲವೆಂದು ಹೇಳುವ ಹಾಗಿಲ್ಲ. ಕೆಲವೊಮ್ಮೆ ಅಳಿಯನು ಕೊಡುವ ಧನ ತಾನು ಹೆಂಡತಿಯನ್ನು ಸಾಕಬಲ್ಲೆನೆಂದು ಸಮರ್ಥಿ ಸಿಕೊಳ್ಳುವುದಕ್ಕಾಗಿ. ಯಾವುದಾದರೊಂದು ಕಾರಣದಿಂದ ಅಳಿ ಯನು ಆರ್ಥಿಕ ಸಂಕಟಕ್ಕೆ ಈಡಾದಾಗ ಮಾವನ ಬಳಿ ನ್ಯಾಸವಾಗಿ ಇಟ್ಟಿದ್ದ ಈ ಕನ್ಯಾಶುಲ್ಕವನ್ನು ಬಳಸಿಕೊಳ್ಳಲು ಅವನಿಗೆ ಅವಕಾಶ ವಿರುತ್ತಿದ್ದಿತು.

## ವಿನಿಮಯ ವಿವಾಹ

ಉತ್ತರ ಭಾರತದ ಸಂತಾಲ, ಹೋ, ಒರಒನ್, ಖರಿಯ, ನಾಗು ಗೋಂಡ, ಕೂಕಿ, ಭಿಲ್ಲ ಮೊದಲಾದ ಆದಿವಾಸಿ ಪಂಗಡಗಳಲ್ಲಿಯೂ ಕೇರಳದ ಮಲೆವೇತನ್, ಮಲನ್, ಕುರುವನ್, ತಂತ ಪುಲಯ, ಮಲ ಪುಲಯ ಮುಂತಾದ ಜನಾಂಗಗಳಲ್ಲಿಯೂ ಕನ್ಯಾಶುಲ್ಕವನ್ನು ಸಲ್ಲಿಸಿ ಮದುವೆಯಾಗುವ ಪದ್ಧತಿಯೇ ಪ್ರಚಲಿತವಾಗಿದೆ. ಸಂಸ್ಕೃತಿಯ ಪ್ರಭಾವವನ್ನು ಮೂಡಿಸಿಕೊಂಡ ಹಲವಾರು ಹಿಂದೂ ಜಾತಿಗಳಲ್ಲಿಯೂ ಇದೇ ಆಚಾರ ಬಳಕೆಯಲ್ಲಿದೆ. ಕೇರಳದಲ್ಲಿ ಕನ್ಯಾ ಶುಲ್ಕವಾಗಿ ಕೊಟ್ಟ ಹಣದ ಒಂದು ಪಾಲು ಹುಡುಗಿಯ ತಾಯಿಗೂ, ಇನ್ನೊಂದು ಪಾಲು ಹುಡುಗಿಯ ಸೋದರ ಮಾವನಿಗೂ ಸೇರುತ್ತದೆ. ಮಲೆವೇತನ್ ಮತ್ತು ಮಲನ್ ಕುರುವನ್ ಜನರಲ್ಲಿ ಹುಡುಗನು ಸರಿಯಾಗಿ ನಡೆದುಕೊಳ್ಳಬೇಕೆಂದು ಈ ಕನ್ಯಾಶುಲ್ಕವನ್ನು ವಿಧಿಸುತ್ತಾರೆ. ನಡೆದುಕೊಳ್ಳದಿದ್ದರೆ, ಕನ್ಯೆಯನ್ನೂ ಕನ್ಯಾಶುಲ್ಕವನ್ನೂ ಕಳೆದುಕೊಳ್ಳಬೇಕಾಗುತ್ತದೆ. ಹಣವನ್ನು ಕೊಟ್ಟು ಹುಡುಗಿಯನ್ನು ಕೊಂಡವರು ಹಾಗೆಯೇ ಕೊಂಡ ದನಕರುಗಳಂತೆಯೇ ಅವಳನ್ನೂ ಕಾಣುವ ಹಾಗಿರಲಿಲ್ಲ.

ಹಲವು ಜನಾಂಗಗಳಲ್ಲಿ ಸೋದರಿ ಇಲ್ಲದ ತರುಣನು ವರನಾಗುವ ಸಂಭವವೇ ಇರುತ್ತಿರಲಿಲ್ಲ. ಕೇರಳದ ಊರಾಳಿ ಜನರಲ್ಲಿಯೂ, ಮದ್ರಾಸಿನ ಮಾದಿಗ ಮುಂತಾದ ಆದಿವಾಸಿಗಳಲ್ಲಿಯೂ, ಅಲ್ಮೋಡದ ಭೋಟಿಯ ಜನರಲ್ಲಿಯೂ ಅಕ್ಕತಂಗಿಯರಿಲ್ಲದ ಹುಡುಗ ಯಾವಜ್ಜೀವವೂ ಬ್ರಹ್ಮಚಾರಿಯಾಗಿಯೇ ಉಳಿಯಬೇಕು. ತನ್ನ ಸೋದರಿಯನ್ನು ಮಾವನ ಮನೆಗೆ ಅವನ ಮಗಳ ಬದಲಾಗಿ ಕಳುಹಿಸಿದ ನಂತರವೇ ಮದುವೆಯಾಗುತ್ತಿದ್ದುದು. ಒಂದು ಹೆಣ್ಣನ್ನು ಕೊಟ್ಟು, ಇನ್ನೊಂದು ಹೆಣ್ಣನ್ನು ತಂದುಕೊಳ್ಳಬೇಕೆಂಬ

ನಿಯಮ ಹಲವಾರು ರೂಪಗಳಲ್ಲಿ ಕಾಣಿಸುತ್ತದೆ. ವರನು ತನ್ನ ಸೋದರಿಯನ್ನು ವಧುವಿನ ಸೋದರನಿಗೆ ಕೊಟ್ಟು ತಾನು ನಿಶ್ಚಿತಾರ್ಥ ಮಾಡಿಕೊಳ್ಳುವ ಪದ್ಧತಿ ಸುಸಂಸ್ಕೃತ ಜನಾಂಗಗಳಲ್ಲಿಯೂ ಆಗಾಗ ತಲೆದೋರುತ್ತದೆ.

**ಬಲವಂತ ಮಾಘಸ್ನಾನ**

ಸಂತಾಲರಲ್ಲಿ ಮತ್ತೊಂದು ವಿಚಿತ್ರ ಪದ್ಧತಿಯಿದೆ. ಹುಡುಗನೊಬ್ಬನು ಹುಡುಗಿಯೊಂದಿಗೆ ಸಲುಗೆಯಿಂದ ಓಡಿಯಾಡಿ, ಮದುವೆಯಾಗಲು ಹಿಂದು ಮುಂದು ನೋಡಿದರೆ ಹುಡುಗಿಯು ರಾತ್ರಿ ಹೊತ್ತು ಯಾರಿಗೂ ತಿಳಿಯದಂತೆ ಹುಡುಗನ ಮನೆ ಹೊಕ್ಕು ಒಂದು ಮೂಲೆಯಲ್ಲಿ ಕುಳಿತುಬಿಡುತ್ತಾಳೆ. ಬೆಳಗಾದ ನಂತರ ಮನೆಯವರು ಅವಳನ್ನು ನೋಡಿ ಹೊರಗೆ ಓಡಿಸಲು ಪ್ರಯತ್ನಪಡುತ್ತಾರೆ. ಅವರ ಆರ್ಭಟಕ್ಕೆ ಆಕೆ ಅಳುಕದೆ ಪಟ್ಟಾಗಿ ಕುಳಿತರೆ ಹುಡುಗನು ಆಕೆಯನ್ನು ಮದುವೆಯಾಗದೆ ವಿಧಿಯಿಲ್ಲ. ಒಂದೊಂದು ಜನಾಂಗದಲ್ಲಿ, ರೊಚ್ಚಿಗೆದ್ದ ಹುಡುಗಿ ಊರ ಹಿರಿಯರನ್ನು ಪಂಚಾಯತಿಗೆ ಕರೆಯುತ್ತಾಳೆ. ಅವರು ಹುಡುಗನನ್ನು ವಿಚಾರಣೆಗೆ ಒಳಪಡಿಸಿ ಅವನ ಅತಿಕ್ರಮಣ ಸ್ಥಿರವಾದರೆ ಮದುವೆಯನ್ನು ವಿಧಿಸುತ್ತಾರೆ.

## 6. ನಾಡಿನಲ್ಲಿ ಸ್ವಾರಸ್ಯದ ಪದ್ಧತಿಗಳು

ಕೆಲವು ಪ್ರಾಚೀನ ಜನಾಂಗಗಳಲ್ಲಿ ಆರ್ಯವಿವಾಹದ ಹಲವಾರು ವಿವರಗಳನ್ನು ಅಳವಡಿಸಿಕೊಂಡಿರುವುದು ಕಾಣುತ್ತದೆ. ನಿಶ್ಚಿತಾರ್ಥ (ವೀಳ್ಯದ ಶಾಸ್ತ್ರ), ದೇವರೂಟ, ಚಪ್ಪರ ಪೂಜೆ, ಧಾರೆ, ಕಂಕಣ ಬಂಧನ, ನಾಗೋಲಿ, ಸಮಾರಾಧನೆ ಮುಂತಾದ ವಿವರಗಳು ಈಕಡೆಯ ಜನರಲ್ಲಿ ಬಹುಮಟ್ಟಿಗೆ ಸೇರಿಬಂದಿವೆ. ಆದರೆ ಇವು ವಿಧ್ಯುಕ್ತವಾಗಿ ನಡೆಯುವುದಿಲ್ಲ. ಮಂತ್ರಗಳ ಬಳಕೆಯೂ ಇಲ್ಲ. ಹಲವಾರು ಪ್ರಾಚೀನ ಜನಾಂಗಗಳಲ್ಲಿ ಜೋಯಿಸರಿಂದ ಮುಹೂರ್ತ ಹಾಕಿಸುವುದು, ಜಾತಕ ನೋಡಿಸುವುದು, ಬ್ರಾಹ್ಮಣ ಪುರೋಹಿತರನ್ನು ಕರೆಸುವುದು ಉಂಟು. ಆದರೆ ಇವೆಲ್ಲ ಅತ್ಯಗತ್ಯವೆಂಬ ನಂಬಿಕೆ ಇಲ್ಲ. ಸಂಸ್ಕೃತರಾದ ಜನರ ಪದ್ಧತಿಗಳನ್ನು ಎರವಲು ಕೊಂಡರೂ ತಂತಮ್ಮ ಪುರಾತನ ಸಂಪ್ರದಾಯಗಳನ್ನು ಬಿಡದೆ ಇರುವುದೊಂದು ವೈಶಿಷ್ಟ್ಯ.

**ಪುರೋಹಿತರ ಪಾಡು**

ಹಳೆಯ ಪದ್ಧತಿಗಳನ್ನು ಬಿಡದಿರುವ ಜನರಲ್ಲಿ ಬ್ರಾಹ್ಮಣ ಪುರೋಹಿತರ ಅವಸ್ಥೆಯೂ ಕೆಲವು ವೇಳೆ ಶೋಚನೀಯವಾಗಿ ಇರುವುದುಂಟು. ನಿದರ್ಶನಕ್ಕೆ ಲಂಬಾಣಿಗಳ ಮದುವೆ. ಲಂಬಾಣಿ (ಅಥವಾ ಬಂಜಾರ, ಸುಗಾಲ) ಯವರು ವ್ಯಾಪಾರ ಮಾಡುತ್ತ ಊರೂರು ಅಲೆದಾಡುವ ಜನ; ದೇಶದಲ್ಲಿ ಎಲ್ಲೆಲ್ಲೂ ಇರುತ್ತಾರೆ. ಬಹುಮಟ್ಟಿಗೆ ಉತ್ತರ ದೇಶದ ಸಂಸ್ಕೃತಿ ಅವರದ್ದು. ಅವರ ಬಂಜಾರಿ ಭಾಷೆಯಲ್ಲಿ ಪಂಜಾಬಿ, ಗುಜರಾತೀ, ಹಿಂದಿ ಭಾಷೆಗಳ ಪ್ರಭಾವವಿದೆ. ಮೈಸೂರು ಸೀಮೆಯಲ್ಲಿಯೂ ಬಹು

ಕಾಲದಿಂದ ಇವರು ನೆಲೆಸಿದ್ದಾರೆ. ಬಳ್ಳಾರಿಯ ಲಂಬಾಣಿಗರಲ್ಲಿ, ಕಡೂರು ಕಡೆಯ ಲಂಬಾಣಿಗರಲ್ಲಿ ಬ್ರಾಹ್ಮಣರನ್ನು ಪೌರೋಹಿತ್ಯಕ್ಕೆಂದು ಕರೆಸುತ್ತಾರೆ.

ಅವರ ಮದುವೆಯ ಸಮಾರಂಭದಲ್ಲಿ ಈ ಪುರೋಹಿತನೊಬ್ಬನೇ ಗಂಡಸು; ಉಳಿದವರೆಲ್ಲ ಹೆಂಗಳೆಯರು. ನೆರೆದವರೆಲ್ಲ ಅವನನ್ನು ಕೂರಿಸಿ ಅವನ ತಲೆಗೆ ಬಿಳಿ ಬಟ್ಟೆಯನ್ನು ಕಟ್ಟಿ, ವರನಂತೆ ಸಿಂಗರಿಸಿ ಅನಂತರ ಅವನ ಕೆನ್ನೆಗೆ ಒಬ್ಬೊಬ್ಬರೂ ಪೆಟ್ಟು ಕೊಟ್ಟು ಅವನ ಮೇಲೆ ಎಲ್ಲರೂ ಬಿದ್ದು ಅವನನ್ನು ಬೀಳಿಸಿ, ಅವನ ಬಟ್ಟೆಯನ್ನೆಲ್ಲಾ ಬಿಚ್ಚಿ ಬೆತ್ತಲೆ ಮಾಡಿ, ಗುದ್ದಿ, ಚಿವುಟಿ ಹಿಂಸಿಸುತ್ತಾರೆ. ಬರುವ ದಕ್ಷಿಣೆಗಾಗಿ ಪುರೋಹಿತನು ಈ ಬವಣೆಯನ್ನೆಲ್ಲ ಸಹಿಸಿಕೊಳ್ಳುತ್ತಾನೆ. ಇದಾದ ಮೇಲೆ ವಧೂವರರನ್ನು ಸೇರಿಸಿ ಮದುವೆ ಮಾಡಿಸುವವನು ಅವನೇ. ಘಟ್ಟಘಟ್ಟಗಳಲ್ಲಿ 'ಶೋಭನ', 'ಶೋಭನ' ಎಂದು ಗಟ್ಟಿಯಾಗಿ ಕೂಗಿಕೊಳ್ಳುವುದಷ್ಟೆ ಅವನು ಹೇಳುವ ಮಂತ್ರ. ಹಿಂದೆ ಪುರೋಹಿತನೊಬ್ಬನು ತನ್ನ ಇಬ್ಬರು ಹೆಣ್ಣು ಮಕ್ಕಳನ್ನು ಮೈನೆರೆದು ಮದುವೆಯಾಗದೆ ಇದ್ದುದರಿಂದ ಕಾಡಿಗೆ ಅಟ್ಟಿಬಿಟ್ಟನೆಂದು ಅವರು ಹೇಳುವ ಕಥೆ. ಲಂಬಾಣಿ ಹೆಂಗಸರು ಈ ಸೇಡನ್ನು ಪ್ರತಿಯೊಬ್ಬ ಪುರೋಹಿತನ ಮೇಲೂ ತೀರಿಸಿಕೊಳ್ಳುತ್ತಾರೆ.

ಮಾದಿಗರು (ಅಥವಾ ಜಾಂಬವರು, ಪದ್ಮ ಜಾತಿಯವರು, ಮಾತಂಗಿಯ ಮಕ್ಕಳು) ಎನಿಸಿಕೊಳ್ಳುವ ಜನ ಕನ್ನಡ ದೇಶದಲ್ಲಿರುವಂತೆಯೇ ತೆಲುಗು, ತಮಿಳುನಾಡುಗಳಲ್ಲಿಯೂ ಇದ್ದಾರೆ. ಈ ಪ್ರಾಂತ್ಯಗಳವರ ನಡುವೆ ವಿವಾಹದ ಪದ್ಧತಿಯಿಲ್ಲ, ಒಂದೊಂದು ಪ್ರಾಂತ್ಯದಲ್ಲಿಯೂ ಹೆಡಿಗೆ--ಬುವ್ವದವರು, ಮೊರ--ಬುವ್ವದವರು, ತಲೆ--ಬುವ್ವದವರು ಎಂಬ ಜಾತಿಭೇದ ಉಂಟು.

ಇವರ ನಡುವೆಯೂ ವಿವಾಹ ನಡೆಯುವ ಹಾಗಿಲ್ಲ. ಆದರೆ ಈ ಜಾತಿಗಳಲ್ಲಿ ಬಿಲ್ಲು, ಬೆಣ್ಣೆ, ಛತ್ರಿ, ಎಮ್ಮೆ, ಹಟ್ಟಿ, ಹೊನ್ನು ಮುಂತಾದ ಹಲವಾರು 'ಬೆಡಗು' ಗಳಿವೆ; ಇವು ಗೋತ್ರಗಳಂತೆ. ಒಂದೇ ಬೆಡಗಿನವರು ಮದುವೆಯಾಗುವುದಿಲ್ಲ. ಮದುವೆಯಾದ ಹುಡುಗಿಯಲ್ಲದೆ ಗಂಡನು ವಿಧವೆಯರನ್ನು ಕೂಡಿಕೆ ಸಂಬಂಧ ದಿಂದ ಕಟ್ಟಿಕೊಳ್ಳಬಹುದು.

## ಸೆರೆ ಬಿಡಿಸುವುದು

ಇವರಲ್ಲಿ ಮದುವೆಗೆ ಮುಂಚೆ ವಧೂವರರ ಕಡೆಯವರು 'ಒಪ್ಪುವೀಳ್ಯ'ದಲ್ಲಿ ಕಲೆತು ಮಾತು ಕತೆ ಮುಗಿದ ಮೇಲೆ ಜಾತಿಯ ಮುಖಂಡನು ಮುದ್ರೆಯುಂಗರ ಸಮ್ಮುಖದಲ್ಲಿ 'ಸಿಂಹಾಸನ ಪೂಜೆ' ಮಾಡುತ್ತಾರೆ. ವೀಳೆಯದೆಲೆಗಳ ಮೇಲೆ ಕಂಬಳಿಯೊಂದನ್ನು ಹಾಸಿ ನಾಲ್ಕು ಮೂಲೆಗಳಲ್ಲಿ ವಿಭೂತಿಯ ಉಂಡೆಗಳನ್ನಿಟ್ಟು ಅದರ ಮೇಲೆ ಮುದ್ರೆಯನ್ನಿಡುವುದೇ ಸಿಂಹಾಸನ. ಆಗ ವಧುವಿನ ತಂದೆಯು ಅವಳಿಗೆ 'ದೇವರ ಹಣ'ವನ್ನು ಕೊಡುತ್ತಾನೆ. ಈ ಹಣದಿಂದಲೇ ತಾಳಿಯನ್ನು ಮಾಡಿಸಬೇಕೆಂಬ ನಿಯಮವಿದೆ. ಮದುವೆಯ ದಿನ 'ಮಳೆನೀರು ಸ್ನಾನ'ವೆಂಬ ವಿಧಿ ಮುಗಿದು ವಧೂವರರಿಬ್ಬರೂ ಮನೆಯ ತಲೆಬಾಗಿಲ ಹೊಸ್ತಿಲ ಮೇಲೆ ಕೈಜೋಡಿಸಿ ಕೂಡುತ್ತಾರೆ. ಮುಂದೆ ನೀರು ತುಂಬಿದ ಮಡಿಕೆ ಇರುತ್ತದೆ. ಹುಡುಗಿಯ ಸೋದರ ಮಾವನು ಹುಡುಗನನ್ನೂ ಹುಡುಗಿಯನ್ನೂ ಒಬ್ಬೊಬ್ಬರನ್ನಾಗಿ ಕೈಗಳಿಂದ ಮೇಲೆತ್ತಿ ಮೂರು ಬಾರಿ ತಿಪ್ಪಾಲೆ ತಿರುಗುತ್ತಾನೆ; ತಿರುಗುವಾಗ ನೀರಿನ ಮಡಕೆಯನ್ನು ಒದ್ದು ಒಡೆಯುತ್ತಾನೆ. ಒಮ್ಮೊಮ್ಮೆ ಹುಡುಗನ ಸೋದರಮಾವನು ಇದರಲ್ಲಿ ಪಾಲ್ಗೊಳ್ಳುತ್ತಾನೆ. ಆಗ ಇಬ್ಬರಿಗೂ ಮರ್ಯಾದೆ ನಡೆಯಬೇಕು. ಇದಾದ ಮೇಲೆ ವಧೂವರರನ್ನು

ಹಾಗೆಯೇ ಎತ್ತಿಕೊಂಡು ಒಳಗೆ ನಡೆದು ಹಸೆಮಣೆಯ ಮೇಲೆ ಕೂರಿಸುತ್ತಾರೆ. ಈ ವಿಧಿಗೆ 'ಸೆರೆ ಬಿಡಿಸುವುದು' ಎಂದು ಹೆಸರು.

ಮೊರಬುವ್ವದವರಲ್ಲಿ ಮದುವೆಯ ದಿನ ಮೊರವೊಂದರಲ್ಲಿ ಅನ್ನವನ್ನು ಮನುಷ್ಯಾಕಾರದಲ್ಲಿ ಇರಿಸಿ ಅದನ್ನು ವರನೂ ವಧುವೂ ವರನತಂದೆತಾಯಿಯರೂ ಪೂಜಿಸುತ್ತಾರೆ. ಅನಂತರ ಈ ಅನ್ನಮನುಷ್ಯನ ತಲೆಯ ಕಡೆ ವರನೂ ಅವನ ಕಡೆಯವರೂ, ಕಾಲುಗಳ ಕಡೆ ವಧುವೂ ಅವಳ ಕಡೆಯವರೂ ಕುಳಿತು ಮೊರದ ಅನ್ನವನ್ನೆಲ್ಲಾ ತಿಂದು ಮುಗಿಸುತ್ತಾರೆ. ಈ ವಿಧಿಯಲ್ಲಿ ನೆಂಟರಲ್ಲ ದವರನ್ನು ಹತ್ತಿರ ಸೇರಿಸುವುದಿಲ್ಲ. ಮದುವೆಯು ರಾತ್ರಿಯೆಲ್ಲ ನಡೆದು ಬೆಳಕು ಹರಿಯುವುದರೊಳಗಾಗಿ ಮುಗಿಯುತ್ತದೆ.

ಇವರಲ್ಲಿ ವಿಧವೆಯರು ವಿವಾಹವಾಗಲು ಯಾವ ಅಡ್ಡಿಯೂ ಇಲ್ಲ. ಆದರೆ ವಿಧವೆಯ ವಿವಾಹದಲ್ಲಿ 'ಅರಳಪ್ಪನ ಗದ್ದಿಗೆ' ಯೆನಿಸಿಕೊಳ್ಳುವ ಕಂಬಳಿಯ ಮೇಲೆ ಕಲಶವೊಂದನ್ನಿಟ್ಟು ಅದನ್ನು ವಧೂವರರಿಬ್ಬರೂ ಪೂಜಿಸಿ ಅದಕ್ಕೆ ತಾಳಿಯನ್ನು ಕಟ್ಟುತ್ತಾರೆ. ಅನಂತರ ಕುಲದ ಹಿರಿಯನು ಇಬ್ಬರಿಗೂ ಒಪ್ಪಿಗೆಯ ತಾಂಬೂಲ ವನ್ನು ಕೊಟ್ಟ ಮೇಲೆ ವಿಧವೆಯೊಬ್ಬಳು ಕಲಶದಿಂದ ತಾಳಿಯನ್ನು ತೆಗೆದು ವರನ ಕೈಯಲ್ಲಿ ಇಡುತ್ತಾಳೆ. ವರನು ವಧುವಿಗೆ ತಾಳಿಯನ್ನು ಕಟ್ಟುತ್ತಾನೆ. ಈ ಸಮಾರಂಭದಲ್ಲಿ ಮುತ್ತೈದೆಯರು ಯಾರೂ ಭಾಗವಹಿಸುವುದಿಲ್ಲ. ಹೀಗೆ ಮದುವೆಯಾದ ವಿಧವೆ ಯೂ ಮೂರು ದಿನಗಳವರೆಗೆ ಯಾವ ಮುತ್ತೈದೆಗೂ ಮುಖ ತೋರಿಸಬಾರದೆಂಬ ನಿಯಮವಿದೆ. ವಿಧವೆಯನ್ನು ಮದುವೆ ಯಾದವನು ಕುಲದವರಿಗೆಲ್ಲ ಹೆಂಡ ಕುಡಿಸಬೇಕು.

**ಬಸವಿ ಮದುವೆ**

ಹರೆಯದ ಹುಡುಗಿಯನ್ನು ಬಸವಿ ಬಿಡುವ ಪದ್ಧತಿ ಹಲವಾರು

ಜನಾಂಗಗಳಲ್ಲಿ ಉಂಟು. ಕೆಲವರಲ್ಲಿ ಹಿರಿಯ ಹುಡುಗಿಯನ್ನು ಬಸವಿ ಬಿಡುವುದು ಪದ್ಧತಿ. ಕೆಲವರು ಖಾಯಿಲೆ, ವಿಪತ್ತು ಬಂದಾಗ ಮಗಳನ್ನು ಬಸವಿ ಬಿಡುತ್ತೇವೆಂದು ಹರಕೆ ಹೊತ್ತಿರುತ್ತಾರೆ ಇಂಥ ಸಂದರ್ಭಗಳಲ್ಲಿ ಹುಡುಗಿಯು ಮೈನೆರೆದ ಮೇಲೆ ಒಳ್ಳೆಯ ದಿನವೊಂದನ್ನು ನೋಡಿ ಹೊಸ ಬಟ್ಟೆಯನ್ನು ಉಡಿಸಿ ಅವಳನ್ನು ಸಿಂಗರಿಸಿ ಊರವರೆಲ್ಲ ನೆರೆದಿದ್ದಾಗ ದೇವರಿಗೋ, ಕತ್ತಿಗೋ, ಕಲ್ಲಿಗೋ ಮದುವೆ ಮಾಡಿಕೊಡುತ್ತಾರೆ. ಮಾದಿಗರಲ್ಲಿ ಕಲಶ ವೊಂದನ್ನು ಇರಿಸಿ ಅದರ ಮುಂದೆ ಹುಡುಗಿಯನ್ನು ಕೂರಿಸಿ ಇತರ ಬಸವಿಯರು ಅವಳ ಮೈಗೆಲ್ಲ ಅರಿಶಿನ ಬಳಿಯುತ್ತಾರೆ, ಮಂಗಳದ್ರವ್ಯಗಳನ್ನು ಅವಳ ಉಡಿಯಲ್ಲಿ ಸುರಿಯುತ್ತಾರೆ. ಅನಂತರ ಭೂಮಿಯಲ್ಲಿ ನೆಟ್ಟ ಭರ್ಜಿಯೊಂದರ ಮುಂದೆ ಅವಳು ನಿಂತು ಅದರ ಮೇಲೆ ಅಕ್ಕಿಯ ಕಾಳನ್ನು ಚೆಲ್ಲುತ್ತಾಳೆ. ಪೂಜಾ ರಿಯು ತಾಳಿಯನ್ನು ಭರ್ಜಿಗೆ ತಾಗಿಸಿ ಹುಡುಗಿಯ ಕುತ್ತಿಗೆಗೆ ಕಟ್ಟುತ್ತಾನೆ. ಇಲ್ಲಿಗೆ ಅವಳು ಬಸವಿಯಾದಂತೆ. ಅವಳು ಭರ್ಜಿ ಯನ್ನು ಭೂಮಿಯಿಂದ ತೆಗೆದು ಗುಡಿಯ ಒಳಗೊಯ್ಯುತ್ತಾಳೆ. ಗುಡಿಯಲ್ಲೇ ಒಂದು ರಾತ್ರಿ ಅವಳು ಇರಬೇಕು. ಅವಳೊಂದಿಗೆ ಕೂಡಿಕೊಳ್ಳಲು ಯಾರೂ ದೊರೆಯದಿದ್ದರೆ ಭರ್ಜಿಯನ್ನು ಪಕ್ಕ ದಲ್ಲಿಟ್ಟುಕೊಂಡು ಮಲಗಬೇಕು.

ಕೆಲವರಲ್ಲಿ ಬಸವಿಯಾಗುವ ಹುಡುಗಿಗೆ ವೀಳೆಯದೆಲೆ ಕಟ್ಟಿದ ಕಂಕಣವನ್ನು ಕಟ್ಟುತ್ತಾರೆ. ನೆರೆದವರು ಅರಿಶಿನದ ಅಕ್ಷತೆಯನ್ನು ಎಸೆಯುತ್ತಾರೆ. ಪೊಡ್ಡರು ಯೆಲ್ಲಮ್ಮನ ಹೆಸರಿನಲ್ಲಿ ಬಸವಿ ಬಿಡುತ್ತಾರೆ. ಯೆಲ್ಲಮ್ಮ ದೇವತೆಯ ಚಿತ್ರವಿರುವ ತಾಳಿಯನ್ನು ಆಕೆಯ ಕತ್ತಿಗೆ ಪೂಜಾರಿ ಕಟ್ಟುತ್ತಾನೆ; ತನ್ನ ಕುಲದ ಯಾರೊಂದಿಗೆ ಬೇಕಾದರೂ ಆಕೆ ಕೂಡಿಕೊಳ್ಳಬಹುದು. ತೆಲುಗು ದೇಶದಲ್ಲಿಯೂ

ಬಸವಿ ಬಿಡುವ ಪದ್ಧತಿ ಇದೆ. ದಾಸರಿ ಜನರು ಹುಡುಗಿಗೆ ಬಿಳಿಸೀರೆ, ಬಿಳಿರವಿಕೆಯುಡಿಸಿ ಪೂಜಾರಿಯ ಬಳಿ ಕರೆದೊಯ್ಯುತ್ತಾರೆ. ಅಲ್ಲಿ ಗುರುವಿನ ಕಾಣಿಕೆ ಸಲ್ಲಿಸಿದ ನಂತರ ಆಕೆ ಕಂಬಳಿಯ ಮೇಲೆ ಕುಳಿತು ಗರುಡಗಂಬ (ದಾಸಯ್ಯನು ತನ್ನ ನಿತ್ಯಯಾತ್ರೆಯಲ್ಲಿ ಒಯ್ಯುವುದು) ವನ್ನು ಎರಡೂ ಕೈಗಳಿಂದ ಹಿಡಿಯುತ್ತಾಳೆ. ಆಗ ಕಂಬಕ್ಕೆ ಸೇರಿಸಿ ಹೂವುಗಳಿಂದ ಅವಳ ಕೈಯನ್ನು ಕಟ್ಟುತ್ತಾರೆ. ಆಗ ಎಲ್ಲರೂ ಬಂದು ಗರುಡಗಂಬವನ್ನು ಪೂಜಿಸುತ್ತಾರೆ. ನಂತರ ತಾಳೀ ಬಂಧನದ ವಿಧಿ ನಡೆದು ಅಂದಿನಿಂದ ಐದು ಶನಿವಾರಗಳು ಆಕೆ ದಾಸಯ್ಯಗಳೊಂದಿಗೆ ನಿತ್ಯಯಾತ್ರೆ ಹೋಗುತ್ತಾಳೆ.

**ಕುರುಬರ ಸೋಬಾನೆ**

ಕುರುಬರಲ್ಲಿ ಹಾಲು ಕುರುಬರು (ಹತ್ತಿ ಕಂಕಣದವರು), ಅಂಡೆ ಕುರುಬರು ಮತ್ತು ಕಂಬಳಿ ಕುರುಬರು (ಉಣ್ಣೆ ಕಂಕಣ ದವರು) ಎಂಬ ಮೂರು ಜಾತಿಗಳುಂಟು, ಅವರು ಜಾತಿಯಲ್ಲಿ ಅಲ್ಲದೆ ಹೊರಗೆ ಮದುವೆ ಆಗುವುದಿಲ್ಲ. ಒಂದೊಂದು ಜಾತಿ ಯಲ್ಲೂ ಆನೆ, ಅರಿಶಿನ, ಹಾವು, ಬಂಡಿ, ಬೆಳ್ಳಿ, ಬೇವು, ಬನ್ನಿ ಚೇಳು ಮುಂತಾದ ಕುಲಗಳಿವೆ. ಕುಲದ ಹೊರಗೆ ಮದುವೆ ಆಗುವುದು. ಇವರ ಮದುವೆ ಗೌಡನ ಸಮ್ಮುಖದಲ್ಲಿ ನಡೆಯು ತ್ತದೆ. ಅವನೇ ಪೂಜಾರಿ. ನಿಶ್ಚಿತಾರ್ಥ, ತಾಂಬೂಲ ಎಲ್ಲ ನಡೆದ ಮೇಲೆ ಮೊದಲ ದಿನ ದೇವರೂಟ, ಎರಡನೆಯ ದಿನ 'ಮೊದಲರಿಶಿನ', ಮೂರನೇ ದಿನ ಚಪ್ಪರದೂಟಪೂಜೆ, ನಾಲ್ಕನೇ ದಿನ ಧಾರೆ ನಡೆಯುತ್ತವೆ. ಧಾರೆ ನಡೆಯುವಾಗ ಗೌಡ ಪೂಜಾರಿಯು,

ಗಿರಿಸೆಟ್ಟಿ ಗಿರಿರಾಮ
ಸರಿಗೇ ದೇವಕ್ಕ

ಮಗಳು ಬರುತಾಳೆಂದು
ಕಂಚಿ ಕಾಳಂಗಿ
ಕುಡಿ ನೀರ ಗಿಂಡಿ
ಪುಣ್ಯವಂತ ಮಗಳೇ
ಭಾಗ್ಯವಂತ ಮಗಳೇ

ಎಂದು ಹೇಳುತ್ತಾನೆ. ಮದುವೆಗೆ ಮುಂಚೆ ವರನನ್ನು ಗೂಳಿಯ ಮೇಲೆ ಕೂರಿಸಿ ಹನುಮಂತನ ಗುಡಿಗೆ ಕಳುಹಿಸುವ ಪದ್ಧತಿ ಇವರಲ್ಲಿ ಉಂಟು. ಕುರುಬರು ಕುದುರೆಯನ್ನೇರುವುದಿಲ್ಲ. ಅವರ ದೇವರು ಬೀರಪ್ಪನ ವಾಹನ ಅದೆಂದು ಅವರ ನಂಬಿಕೆ. ಮದುವೆ ಮುಗಿದ ದಿನ ದೊಡ್ಡ ಗಂಗಾಳ ಒಂದರಲ್ಲಿ ತುಪ್ಪ, ಸಕ್ಕರೆ, ಮೊಸರು ಕಲೆಸಿದ ಅನ್ನವನ್ನಿಟ್ಟು, ನೆಂಟರೆಲ್ಲರೂ ಸುತ್ತ ಕುಳಿತು ತಿಂದು ಮುಗಿಸುತ್ತಾರೆ. ಇದಕ್ಕೆ 'ಭೂಮ' ಇಡುವುದೆಂದು ಹೆಸರು. ಕುಳಿತವರು ಬೆಸ ಸಂಖ್ಯೆಯಲ್ಲಿರಬೇಕೆಂದೂ ಅದಷ್ಟು ಬೇಗ ತಿಂದು ಮುಗಿಸಬೇಕೆಂದೂ ನಿಯಮಗಳಿವೆ. ಬಳ್ಳಾರಿಯ ಕಡೆ ಈ ಪದ್ಧತಿ ವಿಶೇಷವಾಗಿ ಬಳಕೆಯಲ್ಲಿದೆ.

ನೀಲಗಿರಿಯ ಕಡೆ ಇರುವ ಕಾಡು ಕುರುಬರು (ಬೆಟ್ಟ ಕುರುಬರು ಜೇನು ಕುರುಬರು, ಮುಳ್ಳ ಕುರುಬರು) ತುಂಬ ಹಿಂದುಳಿದ ಜನ; ಇವರು ಕುರಿ ಬಟ್ರಾಯನನ್ನು ಪೂಜಿಸುತ್ತಾರೆ. ಇವರಲ್ಲಿ ಮದುವೆ ಪರಸ್ಪರ ಒಪ್ಪಿಗೆಯಿಂದ ಒದಗುವ ಕೂಡಿಕೆಯಷ್ಟೆ. ಇದಕ್ಕಾಗಿ ಯಾವ ಸಮಾರಂಭವೂ ನಡೆಯುವುದಿಲ್ಲ. ಯಾವ ನಿರ್ದಿಷ್ಟವಾದ ವಿಧಿಯೂ ಇಲ್ಲ. ಕೆಲವು ಜನಾಂಗಗಳಲ್ಲಿ ಗಂಡಸು ಮತ್ತು ಹೆಂಗಸು ಎದುರುಬದರಾಗಿ ಕುಳಿತು ಗಡಿಗೆಗಳಿಂದ ಪರಸ್ಪರ ನೀರು ಸುರಿದುಕೊಳ್ಳುತ್ತಾರೆ. ಇದೇ ಅವರ ಧಾರೆ. ಎಲ್ಲ ಸೋದರರೂ ಒಬ್ಬಳೇ ಹೆಂಗಸನ್ನು ಹೆಂಡತಿಯೆಂದು ಬಗೆದು

ನಡೆದುಕೊಳ್ಳುವ ಪದ್ಧತಿಯೂ ಇವರಲ್ಲಿ ಉಂಟು. ಲೈಂಗಿಕ ವ್ಯವಹಾರದ ಕಟ್ಟು ಅವರಲ್ಲಿ ಅಷ್ಟೇನು ಬಲವಾದುದಲ್ಲ.

## ಗಿಂಡಿ ಕಳುವು

ಜಾಪೆ, ಬುಟ್ಟಿಗಳನ್ನು ಮಾಡುವ ಮೇದರಲ್ಲಿ ಗವರಿಗರು, ಹಳ್ಳಿ ಮೇದರು, ಬಂಡಿಕಾರ ಮೇದರು ಎಂಬ ಮೂರು ಜಾತಿಗಳಿವೆ. ಒಂದೊಂದು ಜಾತಿಯಲ್ಲಿಯೂ ಬೆಳ್ಳಿ, ನಾಗ, ಆಲ, ಸಂಪಿಗೆ ಮುಂತಾದ ಕುಲಗಳುಂಟು. ಜಾತಿಯ ಒಳಗೆ, ಕುಲದ ಹೊರಗೆ ಮದುವೆ ನಡೆಯುತ್ತದೆ. ಇವರ ಮದುವೆಯಲ್ಲಿ ಎಲ್ಲರಲ್ಲಿ ನಡೆಯುವ ಧಾರೆಯಲ್ಲದೆ ರಾತ್ರಿಯ ವೇಳೆ 'ತುಂಬೆ ಹುವ್ವಿನ ಧಾರೆ'ಯೊಂದು ನಡೆಯುತ್ತದೆ. ಇದಾದನಂತರ ನಡೆಯುವ 'ಗಿಂಡಿ ಶಾಸ್ತ್ರ' ವಿಚಿತ್ರವಾದುದು.

ಧಾರೆಯ ಮರುದಿನ ವರನು ವಧುವಿನ ಮನೆಯಿಂದ ಬಳೆಯೊಂದನ್ನೂ ಹಿತ್ತಾಳೆಗಿಂಡಿಯೊಂದನ್ನೂ ಕದ್ದು ಅದೇ ಮನೆಯಲ್ಲಿ ಅವಿತುಕೊಳ್ಳುತ್ತಾನೆ. ವಧುವು ಅವನನ್ನು ಹುಡುಕಾಡುತ್ತ ವರನ ಸೋದರನನ್ನು ಹಿಡಿಯುತ್ತಾಳೆ. ಅವನ ಕೈಗಳನ್ನು ಕಟ್ಟಿ ವಿಚಿತ್ರವಾದ ಉಡುಪುಗಳನ್ನು ತೊಡಿಸಿ ಮದುವೆಮಂಟಪಕ್ಕೆ ಕರೆದೊಯ್ಯುತ್ತಾರೆ. ಅಲ್ಲಿ ಅವನು ವರನಲ್ಲವೆಂದು ತಿಳಿದಾಗ ಅವನನ್ನು ಬಿಟ್ಟುಕೊಟ್ಟು ಅವನನ್ನು ಬವಣೆ ಪಡಿಸಿದ ತಪ್ಪಿಗಾಗಿ ಕಾಣಿಕೆಗಳನ್ನು ಕೊಡುತ್ತಾರೆ. ಇದಾದ ಮೇಲೆ ವರನನ್ನು ಹುಡುಕಿ ಕರೆತಂದು ಅವನನ್ನು ವಿಶೇಷವಾಗಿ ಸತ್ಕರಿಸುತ್ತಾರೆ. ಅವನು ಮುನಿಸಿಕೊಂಡಿದ್ದಾನೆಂದೂ ಇದಕ್ಕಾಗಿಯೇ ಅವನು ಗಿಂಡಿಯನ್ನು ಕದ್ದದ್ದೆಂದೂ ಈ ನಾಟಕದ ಹಿಂದಿರುವ ಕಲ್ಪನೆ. ವಧುವು ಮುಂಡಿಯೂರಿ ಅವನ ಕ್ಷಮೆ ಕೇಳುತ್ತಾಳೆ; ಅವಳ ತಂದೆ ಬಳುವಳಿಗಳನ್ನು

ಕೊಡುತ್ತೇನೆಂದು ವಾಗ್ದಾನ ಮಾಡುತ್ತಾನೆ. ಇದಾದನಂತರ ನಾಗೋಲಿ ಶಾಸ್ತ್ರ ನಡೆಯುತ್ತದೆ.

**ಬೀರಗುಡಿ ಪೂಜೆ**

ಕೋಲಾರ ಮತ್ತು ಬೆಂಗಳೂರು ಜಿಲ್ಲೆಗಳಲ್ಲಿ ಮೊಸರು ಒಕ್ಕಲು ಎಂಬ ಜನ ಇದ್ದಾರೆ. ಇವರಲ್ಲಿ ಜಾತಿ, ಸಾಲು, ಬೆಡಗು ಎಂಬ ಭೇದಪ್ರಭೇದಗಳಿವೆ. ಮದುವೆಗೆ ಮುಂಚೆ ಕಣೆ ಕೇಳಿ ಒಪ್ಪು ವೀಳ್ಯ ಮಾಡಿಕೊಳ್ಳುತ್ತಾರೆ. ಮೊದಲರಿಶಿನ ನಡೆದನಂತರ ದೇವರೂಟ ನಡೆಯುತ್ತದೆ. ಇವರಲ್ಲಿ ಕರಗಪೂಜೆಯ ಪದ್ಧತಿಯುಂಟು. ಒಂದರ ಮೇಲೊಂದು ಗಡಿಗೆಗಳನ್ನು ಪೇರಿಸಿ, ಸಿಂಗರಿಸಿ ಪೂಜಿಸುವುದು ಕರಗ ಪೂಜೆ. ವರನೂ ಅವನ ಕಡೆಯವರೂ ಮಧ್ಯರಾತ್ರಿಯ ಸುಮಾರಿನಲ್ಲಿ ಮದುವೆ ಮಂಟಪದಿಂದ ಹೊರಟು ಮೂರು ದಾರಿ ಸೇರುವ ಕಡೆ ಮನುಷ್ಯನ ಆಕೃತಿಯನ್ನು ನೆಲದ ಮೇಲೆ ರಚಿಸಿ ಅದಕ್ಕೆ ಅನ್ನದ ಎಡೆಯನ್ನಿಟ್ಟು ಗದ್ದಲವಿಲ್ಲದೆ ಹಿಂದಿರುಗಿ ನೋಡದೆ ಮದುವೆ ಚಪ್ಪರಕ್ಕೆ ಹಿಂದಿರುಗುತ್ತಾರೆ. ಇದಕ್ಕೆ 'ಬೀರಗುಡಿ' ಎಂದು ಹೆಸರು. ಕ್ರೂರ ದೇವತೆಗಳನ್ನು ತೃಪ್ತಿಪಡಿಸುವ ವಿಧಾನ ಇದು.

ಮದುವೆಯಲ್ಲಿ ಕ್ರೂರ ದೇವತೆಗಳನ್ನು ತೃಪ್ತಿ ಪಡಿಸುವ ಪದ್ಧತಿ ನಗರ್ತರಲ್ಲಿಯೂ ಉಂಟು. ಸರಿ ರಾತ್ರಿಯಲ್ಲಿ ಮೇಳದವರನ್ನು ಮುಂದು ಮಾಡಿಕೊಂಡು ವರನು ನಾಲು ರಸ್ತೆಗಳು ಸೇರುವ ಕಡೆ ಬರುತ್ತಾನೆ. ಕುಲದ ಹಿರಿಯನು ಅವನೊಂದಿಗೆ ಭರ್ಜಿ ಹಿಡಿದು ಬಂದಿರುತ್ತಾನೆ. ಅಲ್ಲಿ ಬಾಳೆಯ ಎಲೆಯನ್ನು ಹಾಸಿ ಅದರ ಮೇಲೆ ಅನ್ನ ಇಡುತ್ತಾರೆ. ಬಂದವರೆಲ್ಲ ಇದನ್ನು ಪೂಜಿಸಿದ ಮೇಲೆ ಭರ್ಜಿ ಹಿಡಿದ ಹಿರಿಯನು ಎಲೆಯನ್ನು ಮೂರು ಬಾರಿ ಸುತ್ತಿ ಮಾತನಾಡದೆ ಮನೆಯ ಕಡೆ ತಿರುಗುತ್ತಾನೆ. ಉಳಿದ

ವರು ಅವನನ್ನು ಹಿಂಬಾಲಿಸಿ ಹೋಗುತ್ತಾರೆ. ಮೇಳದವರು ಮಾತ್ರ ಸ್ವಲ್ಪ ಹೊತ್ತು ಅಲ್ಲಿಯೇ ಇದ್ದು ಅನಂತರ ಬೇರೆದಾರಿ ಹಿಡಿದು ಮದುವೆ ಚಪ್ಪರಕ್ಕೆ ಬರುತ್ತಾರೆ.

ಹೆಂಡತಿಯು ನಡತೆ ಕೆಟ್ಟಿದ್ದರೆ. ಗಂಡನು ಕ್ರೂರಿಯಾದರೆ ಮೊರಸು ಜನಾಂಗದಲ್ಲಿ ವಿವಾಹ ವಿಚ್ಛೇದಕ್ಕೆ ಅವಕಾಶವುಂಟು. ಆದರೆ ಮತ್ತೆ ಮದುವೆಯಾಗುವ ಹಾಗಿಲ್ಲ. ತನ್ನ ಜಾತಿಯಲ್ಲಿ ಯಾರೊಂದಿಗಾದರೂ ಕೂಡಿಕೆಯ ಸಂಬಂಧವನ್ನು ಬೆಳೆಸಿಕೊಳ್ಳಬಹುದು. ಒಬ್ಬನು ಇನ್ನೊಬ್ಬನ ಹೆಂಡತಿಯಲ್ಲಿ ಅನುರಕ್ತನಾದರೆ ಅವಳ ಗಂಡನಿಗೆ ಮದುವೆಯ ವೆಚ್ಚವನ್ನು ಕೊಟ್ಟುಬಿಟ್ಟರಾಯಿತು; ಅವಳನ್ನು ತಾನು ಕೂಡಿಕೊಳ್ಳಬಹುದು. ಅಷ್ಟೇ ವಿವಾಹ ವಿಚ್ಛೇದದ ವಿಧಿ. ಗಂಡು ಸಂತತಿ ಇಲ್ಲವಾದರೆ ಅಳಿಯನನ್ನೇ ದತ್ತು ತೆಗೆದುಕೊಂಡು ಅವನನ್ನೇ ತನ್ನ ಉತ್ತರಾಧಿಕಾರಿಯನ್ನಾಗಿ ನೇಮಿಸುವುದು ಇವರಲ್ಲಿರುವ ಪದ್ಧತಿ.

ನೀಲಗಿರಿಯ ಕಡೆ ಉಳುಮೆ ಮಾಡುವ ಬಡಗರು ಪ್ರಾಚೀನ ಜನಾಂಗಗಳಲ್ಲಿ ಸೇರಿದವರು. ತೋಡರಿಗಿಂತ ಅಧಿಕ ಸಂಖ್ಯೆಯಲ್ಲಿರುವ ಇವರು ಮೊದಲಿಗೆ ಮೈಸೂರು ಬಯಲು ಸೀಮೆಯವರೇ ಆಗಿದ್ದು ಇಲ್ಲಿ ಒದಗಿದ ಬರಗಾಲವೊಂದರಲ್ಲಿ ನೀಲಗಿರಿಗೆ ವಲಸೆ ಹೋದವರೆಂದು ಹೇಳುತ್ತಾರೆ. ಇವರಲ್ಲಿ ಹದಿನೆಂಟು ಕುಲಗಳಿವೆಯಂತೆ. ಈ ಕುಲಗಳಿಗೆ ಮಾರಿ, ಕಸ್ತೂರಿ, ಬೆಳ್ಳಿ ಮೊದಲಾದ ಹೆಸರುಗಳಿವೆ. ಕುಲಗಳು ಗೋತ್ರದಂತೆ. ಒಂದೇ ಕುಲದವರು ಮದುವೆ ಆಗುವುದಿಲ್ಲ. ಇವರಲ್ಲಿ ಉಳುಮೆಗೆ ಜನ ಅಗತ್ಯವಾದಾಗ ಸುಮಾರಾಗಿ ಅನುಕೂಲಸ್ಥನಾದವನು ಅಷ್ಟು ಅನುಕೂಲ ಇಲ್ಲದ ಮನೆಯ ಹುಡುಗನಿಗೆ ತನ್ನ ಮಗಳನ್ನು ಕೊಡುವೆನೆಂದು ವಾಗ್ದಾನ ಮಾಡುತ್ತಾನೆ. ಆಗ ಆ ಹುಡುಗನು

ಹುಡುಗಿಯ ತಂದೆಯ ಬಳಿಯೇ ನಿಂತು ಮದುವೆ ಆಗುವವರೆಗೆ ಕೆಲಸ ಮಾಡುತ್ತಾನೆ.

ಮದುವೆಯ ಶಾಸ್ತ್ರ ಇವರಲ್ಲಿ ಸರಳವಾದುದು. ವಧುವನ್ನು ವರನ ಮನೆಗೆ ಉತ್ಸವದಲ್ಲಿ ಒಯ್ಯುತ್ತಾರೆ. ಮನೆಯ ತಲೆ ಬಾಗಿಲಿನಲ್ಲಿ ವರನ ತಾಯಿಯು ನಿಂತು ವಧುವಿನ ಕೈಗೆ ಮೂರು ಬಾರಿ ನೀರನ್ನು ಬಿಡುತ್ತಾಳೆ; ಅನಂತರ ವಧುವಿನ ಕತ್ತಿಗೆ ಆಕೆಯೇ ಮಾಲೆಮಣಿಯನ್ನು ಕಟ್ಟಿ ಆಕೆಗೆ ತಿನ್ನಲು ಸಾಮೆ ಅನ್ನವನ್ನೂ ಕುಡಿಯಲು ನೀರನ್ನೂ ವರನ ಸೋದರಿ ಕೊಡಬೇಕು. ಅನಂತರ ವಧುವೂ ಮತ್ತಿಬ್ಬರು ಹೆಂಗಸರೂ ಉತ್ಸವದಿಂದ ನದಿಗೆ ಹೋಗಿ ಅಡುಗೆಗೆಂದು ನೀರನ್ನು ತರುತ್ತಾರೆ. ಇದಾದೊಡನೆ ವಧುವು ನೆರೆದ ನೆಂಟರಿಗೆಲ್ಲ ನಮಸ್ಕಾರ ಮಾಡಿ ಅವರಿಂದ ಆಶೀರ್ವಾದ ಪಡೆಯುತ್ತಾಳೆ. ಇಷ್ಟಾದ ಮೇಲೆ ಔತಣದ ಊಟದಿಂದ ಮದುವೆ ಮುಗಿಯುತ್ತದೆ.

## ಬಹು ಪತ್ನಿತ್ವ

ಬಡಗರಲ್ಲಿ ಸ್ತ್ರೀಯು ಬೇಕೆಂದಾಗ ತನ್ನ ಗಂಡನನ್ನು ಬಿಟ್ಟು ಬೇರೊಬ್ಬನನ್ನು ಕಟ್ಟಿ ಕೊಳ್ಳುವ ಅವಕಾಶವುಂಟು. ಬಹುಪತ್ನಿತ್ವ ಪದ್ಧತಿಯೂ ಇವರಲ್ಲಿ ಬಳಕೆಯಲ್ಲಿದೆ. ವಿಧವೆಯರ ಪುನರ್ವಿವಾಹಕ್ಕೆ ಯಾವ ನಿರ್ಬಂಧವೂ ಇಲ್ಲ. ಗಂಡ ಊರಿನಲ್ಲಿ ಇಲ್ಲದಿರುವಾಗ ಗಂಡನ ಸೋದರರು ಆಕೆಯನ್ನು ಭೋಗಿಸಿದರೆ ಅನುಚಿತವೆಂಬ ಪರಿಗಣನೆ ಅವರಲ್ಲಿ ಇರದು. ಹಲವು ವೇಳೆ ಹೆಂಡತಿಗಿಂತ ಗಂಡ ತುಂಬ ಸಣ್ಣ ವಯಸ್ಸಿನವನಾಗಿರುವುದುಂಟು. ಅಂಥ ಸಂದರ್ಭದಲ್ಲಿ ಗಂಡನು ಪ್ರಾಪ್ತ ವಯಸ್ಕನಾಗುವವರೆಗೆ ಆಕೆ ತನಗೆ ಇಷ್ಟ ಬಂದವನೊಡನೆ ಕೂಡಿಕೊಳ್ಳುತ್ತಿರಬಹುದು; ತನ್ನ ಚಿಕ್ಕಮ್ಮನ

ಮಗನೊಂದಿಗೆ ವಿಹರಿಸುವುದು ವಾಡಿಕೆ. ಇದರಿಂದ ಯಾವ ಕಳಂಕದ ಸೋಂಕೂ ತಗಲುವುದಿಲ್ಲ.

ಇರುಳರು ನೀಲಗಿರಿಯ ಕಡೆಯುವರೇ ಆದ ಗುಡ್ಡದ ಕಾಡು ಜನ. ಇವರಲ್ಲಿ ಮದುವೆ ಎಂದರೆ ವರನು ಹುಡುಗಿಯನ್ನು ಕದ್ದೊಯ್ದು ಕಾಡಿನಲ್ಲಿ ಒಂದೆರಡು ದಿನ ಇದ್ದು, ಹಳ್ಳಿಗೆ ಹಿಂದಿರುಗಿ ಕೋಳಿಯನ್ನೋ ಕುರಿಯನ್ನೋ ಬಲಿಗೊಟ್ಟು ಜಾತಿಯವರಿಗೆಲ್ಲ ಊಟ ಮಾಡಿಸುವುದು. ಅವನು ಹೆಂಡತಿಯಾಗುವವಳ ಕತ್ತಿಗೆ ತಾಳಿಯನ್ನು ಕಟ್ಟದಲ್ಲದೆ ಅವನು ಜಾತಿಯಲ್ಲಿ ಇರುವ ಹಾಗಿಲ್ಲ. ಇವರಲ್ಲಿಯೂ ಕನ್ಯಾಶುಲ್ಕದ ಪದ್ಧತಿ ಉಂಟು. ಇವರಲ್ಲಿ ಕೆಲವು ಪಂಗಡಗಳಲ್ಲಿ ಗಂಡಸಿನ ಚುಟ್ಟವನ್ನು ಹೆಂಗಸು ಬಾಯಿಯಲ್ಲಿಟ್ಟು ಕೊಂಡು ಸೇದಿದರೆ ಅವಳು ಅವನ ಹೆಂಡತಿಯಾದಂತೆ. ಮದುವೆಯ ಇನ್ನು ಯಾವ ವಿಧಿಯೂ ನಡೆಯುವುದಿಲ್ಲ. ಬೆಳೆದ ಹುಡುಗಿಗೆ ವರನು ದೊರೆಯದಿದ್ದರೆ ಅವಳನ್ನು ಮರಕ್ಕೆ ಅಥವಾ ಕತ್ತಿಗೆ ಮದುವೆಮಾಡುವ ಸಂಪ್ರದಾಯ ಇವರಲ್ಲಿ ಉಂಟು.

## ಪ್ರಣಯ ಕಲಹ

ಬಳೆಗಾರ ಬಲಿಜರು ಮೊದಲಿಗೆ ತೆಲುಗು ದೇಶದವರು; ಕನ್ನಡ ದೇಶದಲ್ಲಿ ತುಂಬ ಹಿಂದಿನಿಂದ ನಿಂತಿದ್ದರೂ ತೆಲುಗು ಸಂಪ್ರದಾಯ ಗಳನ್ನೇ ಅನುಸರಿಸುತ್ತಾರೆ. ಅವರಲ್ಲಿ ಸಮುದ್ರ, ಘಂಟೆ, ಹುಲಿ, ಹಲ್ಲಿ, ಉಂಗುರ, ಎಮ್ಮೆ, ಹವಳ ಮುಂತಾದ ಮನೆ ಹೆಸರುಗಳು (ಈಂಟಿಪೇರು) ಉಂಟು. ಇವರ ಮದುವೆಯಲ್ಲಿ ಕನ್ಯಾದಾನ, ಧಾರೆ, ಹೋಮ ಮುಂತಾದ ಪದ್ಧತಿಗಳು ಇದ್ದರೂ ಪ್ರಮುಖವಾದ ವಿಧಿಯೆಂದರೆ ಮದುವೆಗೆ ಮುಂಚೆ ಹೆಣ್ಣು ಪಿತೃದೇವತೆಗಳ ಪೂಜೆ ಮಾಡುವುದು (ಪೇರಾಂಟಾಲು ಪೂಜ). ಮೂಸುಕಮ್ಮ

ಬಲಿಜರಲ್ಲಿ ಈ ದೇವತೆಗಳನ್ನು ಐವರು ಹೆಂಗಸರು ಪ್ರತಿನಿಧಿಸುತ್ತಾರೆ. ವಧೂವರರಿಗೆ ನೆಂಟರಾದ ಇವರು ಒಪ್ಪತ್ತು ಊಟ ಮಾಡಿ ನೇಮದಿಂದ ಇದ್ದು ಪೂಜೆಯನ್ನೂ ಸತ್ಕಾರವನ್ನೂ ಪಡೆಯುತ್ತಾರೆ. ಈ ಪಿತೃಪೂಜೆಯಾದ ನಂತರ ವರನ ಉಗುರುಗಳನ್ನು ಕತ್ತರಿಸುವ ಶಾಸ್ತ್ರ ನಡೆಯುತ್ತದೆ. ಇದಾದ ಮೇಲೆ ಅವನನ್ನು ಗಣಪತಿಯ ಗುಡಿಗೆ ಒಯ್ದು ಅಲ್ಲಿ ಬಾಸಿಂಗವನ್ನು ತಲೆಗೆ ಕಟ್ಟುತ್ತಾರೆ.

ಮದುವೆಯಾದ ಮರುದಿನ ಬಲಿಜವರನು ಸಿಟ್ಟುಗೊಂಡಂತೆ ನಟಿಸಿ ಮದುವೆಯ ಮನೆಯನ್ನು ಬಿಟ್ಟು ನೆರೆಯ ಮನೆಯೊಂದಕ್ಕೆ ಹೊರಡುವ ವಿಧಿಯು ಸ್ವಾರಸ್ಯವಾದುದು. ವಧುವೂ ಆಕೆಯ ನೆಂಟರೂ ಸಂಭ್ರಮದಿಂದ ಅಲ್ಲಿಗೆ ಹೋಗಿ ಅವನನ್ನು ಕರೆತರುತ್ತಾರೆ. ಹಿಂದಕ್ಕೆ ಬರುವಾಗ ಹೆಂಗಳೆಯರು ವರನನ್ನು ಬಾಗಿಲಿನಲ್ಲಿ ತಡೆದು ಅವನಿಂದ ವಧುವಿನ ಹೆಸರನ್ನು ಕೂಗಿಸುತ್ತಾರೆ. ಅವರಿಗೆ ಹಣವನ್ನು ಅವನು ಕೊಟ್ಟು ಆರತಿ ಮಾಡಿಸಿಕೊಳ್ಳಬೇಕು.

## ದೊಂಬರಲ್ಲಿ

ದೊಂಬರಲ್ಲಿ ಕನ್ಯಾಶುಲ್ಕದ ಪದ್ಧತಿ ಇದೆ. ಇವರೂ ತೆಲುಗು ದೇಶದಿಂದ ಬಂದು ಇಲ್ಲಿ ನೆಲೆಸಿದ ಜನ. ಇವರು ಊರೂರು ಅಲೆಯುವುದು ವಾಡಿಕೆ. ಇವರ ಕಟ್ಟೇಮನೆ ತುಂಕೂರು; ಅಲ್ಲಿನ ಎಲ್ಲಮ್ಮನ ಗುಡಿಯಲ್ಲಿಯೇ ಅವರ ಮದುವೆಗಳು ನಡೆಯಬೇಕೆಂದು ಕಟ್ಟು ಇದ್ದಿತು. ಈಚೆಗೆ ಅವರು ಇದ್ದಲ್ಲಿಯೇ ಗುಂಪಿನ ಯಜಮಾನನ ಸಮ್ಮುಖದಲ್ಲಿ ಮದುವೆಯನ್ನು ನಡೆಸುತ್ತಾರೆ. ಸಾಮಾನ್ಯವಾಗಿ ವರನ ಮನೆಗೆ ವಧುವಿನ ಕಡೆಯವರು ಬಂದು ಮದುವೆ ಮಾಡಿಸಿಕೊಳ್ಳುತ್ತಾರೆ. ಮದುವೆಯ ಎರಡನೆಯ ದಿನ ಮದುವಣಿ

ಗನಿಗೆ ಅವನ ಸೋದರಮಾವನು ಕ್ಷೌರ ಮಾಡಬೇಕೆಂಬ ನಿಯಮವಿದೆ. ಇದಾದನಂತರ ಹುಡುಗನೂ ಹುಡುಗಿಯೂ ಎದುರುಬದರಾಗಿ ಎರಡು ಒನಕೆಗಳ ಮೇಲೆ ಕುಳಿತು ಸ್ನಾನ ಮಾಡಿಸಿಕೊಳ್ಳುತ್ತಾರೆ. ಇದು ಮುಗಿದು ಕಂಕಣಬಂಧನ, ತಾಳೀಬಂಧನವಾದ ಮೇಲೆ ನೆರೆದವರೆಲ್ಲ ವಧೂವರರ ಕೈಗೆ ಹಾಲನ್ನು ಧಾರೆಯಾಗಿ ಸುರಿಯುತ್ತಾರೆ.

ಹೀಗೆ ವಿವಾಹವಲ್ಲದೆ ಕೂಡಿಕೆಯೂ ದೊಂಬರಲ್ಲಿ ಉಂಟು. ಮದುವೆಯಾದ ಹೆಂಗಸರು ಹಾದರ ಮಾಡಿದರೆ ಆಕೆಗೆ ಕುಲದವರು ದಂಡವನ್ನು ವಿಧಿಸಿ, 'ತೀರ್ಥ' ಕೊಟ್ಟು, 'ಕುಲದ ಹುಡುಗಿ' (ಕುಲಂಬಿಡ್ಡ) ಯನ್ನಾಗಿ ಮಾಡಿಬಿಡುತ್ತಾರೆ. ಎಂದರೆ ಆಕೆ ಇನ್ನು ಮುಂದೆ ವೇಶ್ಯೆ. ಹಾದರ ಮಾಡಿದ ಗಂಡಸನ್ನು ಕುಲದಿಂದ ಹೊರಕ್ಕೆ ಹಾಕುತ್ತಾರೆ. ಅವರಲ್ಲಿ ವಿವಾಹ ವಿಚ್ಛೇದಕ್ಕೆ ಅವಕಾಶವುಂಟು. ಕುಲದವರನ್ನೆಲ್ಲ ಕರೆದು ಹೆಂಗಸು ತನ್ನ ತಾಳಿಯನ್ನು ಗಂಡನಿಗೆ ಕೊಟ್ಟುಬಿಟ್ಟರೆ ಮದುವೆಯ ಕಟ್ಟು ಕಳಚಿದಂತೆಯೇ. ಅವಳು ನಂತರ ಮತ್ತೊಂದು ಮದುವೆಯನ್ನು ಮಾಡಿಕೊಳ್ಳಬಹುದು. ಮೈನೆರೆದ ಹುಡುಗಿಯರನ್ನು ಮದುವೆ ಮಾಡದೆ ಬಸವಿ ಬಿಡುವ ಪದ್ಧತಿಯೂ ಅವರಲ್ಲಿ ಬಳಕೆಯಲ್ಲಿದೆ.

**ಕಲ್ಯಾಣದಲ್ಲಿ ಕಳುವು**

ಶಿವಮೊಗ್ಗ ಜಿಲ್ಲೆಯ ಗುಡಿಗಾರರು ತಾವು ಕ್ಷತ್ರಿಯರೆಂದು ನಿರ್ದೇಶಿಸಿಕೊಳ್ಳುತ್ತಾರೆ. ಉತ್ತರ ಕನ್ನಡ ಜಿಲ್ಲೆಯಿಂದ ಹದಿನೈದನೆಯ ಶತಮಾನದ ಸುಮಾರಿಗೆ ಇವರು ಶಿವಮೊಗ್ಗ ಜಿಲ್ಲೆ,ಅದರಲ್ಲೂ ಸೊರಬ, ಸಾಗರ ಈ ಸ್ಥಳಗಳಲ್ಲಿ ವಲಸೆಬಂದರೆಂದು ಹೇಳುತ್ತಾರೆ. ಅವರು ಮೊದಲಿಗೆ ಕೊಂಕಣಿ ಜನ; ಇಂದಿಗೂ ಅವರ ಕುಲದೇವರು ಗೋವೆಯ ನಾಗೇಶ್ವರ. ಇವರ ಮದುವೆಯಲ್ಲಿ ವರ

ಪೂಜೆ, ನಾಗೋಲಿ, ಗೃಹಪ್ರವೇಶ ಮುಂತಾದ ಪದ್ಧತಿಗಳುಂಟು. ಮದುವೆಯ ಮೂರನೆಯ ದಿನ ವರನು ವಧುವಿನ ಮನೆಯಿಂದ ಕೃಷ್ಣನ ವಿಗ್ರಹವೊಂದನ್ನು ಕದ್ದು ಓಡಿ ಹೋಗಿ ಆ ರಾತ್ರಿಯನ್ನು ಬೇರೊಂದೆಡೆ ಕಳೆಯುತ್ತಾನೆ. ಮರುದಿನ ಬೆಳಿಗ್ಗೆ ನೆಂಟರು ಅವನನ್ನು ಒಡಿದು ತಂದು ನಾಗೋಲಿ ಶಾಸ್ತ್ರವನ್ನು ಮುಂದುವರಿಸುತ್ತಾರೆ. ಗುಡಿಗಾರರಲ್ಲಿ ಮದುವೆಯ ಸಂದರ್ಭದಲ್ಲೇ ಉಪನಯನ ನಡೆಯುತ್ತದೆ.

## ಹಾಲಿನಿಂದ ಕ್ಷೌರ

ತಮಿಳುನಾಡಿನ ಬಂಟರು ವೀರಜನ. ಅಳಿಯಸಂತಾನ–ಕಟ್ಟನ್ನು ಒಪ್ಪಿದ ಇವರಲ್ಲಿ ಬಲಿ (ಎಂದರೆ ಕುಲ) ಭೇದವುಂಟು. ತಾಯಿಯ ಬಲಿಯನ್ನು ಮಗ ಗ್ರಹಿಸುತ್ತಾನೆ. ಒಂದೇ ಬಲಿಯವರು ಮದುವೆ ಆಗುವ ಹಾಗಿಲ್ಲ. ಬಂಟರ ಬಲಿಗಳು, ಬೆಲ್ಲದವರು ((ಬೆಲ್ಲತ್ತನ್ನಾಯ), ಬೂದಿಯವರು, ಚೇಳಿನವರು (ಕರ್ಕಡಬೆನ್ನಾಯ್). ಪುಲಿಯವರು (ಪುಲಿಯತ್ತನ್ನಾಯ). ಹೆಗ್ಗಣದವರು (ಪೆರುಗಡನ್ನಾಯ) ಎಂದು ಮುಂತಾಗಿ ಇರುತ್ತವೆ. ಅವರಲ್ಲಿ 'ಕೈಧಾರೆ'. 'ಬು (ಬಿ)ಡುಧಾರೆ' ಎಂದು ಎರಡು ಬಗೆಯ ಮದುವೆ ಬಳಕೆಯಲ್ಲಿದೆ. ಗಂಡು ಹೆಣ್ಣು ಒಪ್ಪಿದ ನಂತರ 'ನಿಶ್ಚಯ ತಾಂಬೂಲ' ಶಾಸ್ತ್ರ ನಡೆದು ಎರಡೂ ಕಡೆಯವರಿಗೆ ವೀಳ್ಯ ವಿನಿಮಯವಾಗುತ್ತದೆ. ಧಾರೆ ಆಗುವ ಮುನ್ನ ವರನು ಕ್ಷೌರ ಮಾಡಿಸಿಕೊಂಡು ಸ್ನಾನ ಮಾಡಿ ಬರುತ್ತಾನೆ. ವರನ ಕ್ಷೌರ ನಡೆಯುವಾಗ ನೀರನ್ನು ಬಳಸದೆ ಹಸುವಿನ ಹಾಲನ್ನು ಬಳಸುವುದೊಂದು ವೈಶಿಷ್ಟ್ಯ: ವರನಿಗೆ ಕ್ಷೌರ ನಡೆದ ನಂತರ ಆ ಕತ್ತಿಯನ್ನು ವಧುವಿನ ತಲೆಗೆ ಮುಟ್ಟಿಸುವ ಪದ್ಧತಿಯೂ ಇದೆ. ಧಾರೆ ಗಿಂಡಿಯನ್ನು ನೆರೆದವರೆಲ್ಲರೂ ಮುಟ್ಟಿ ವಧೂವರರ ಕೈಹಿಡಿದು

ಅದನ್ನು ಮೂರು ಬಾರಿ ಮೇಲಕ್ಕೆತ್ತಿ ಅನಂತರ ವಧೂವರರ ಬೊಗಸೆಗೆ ಸುರಿಯುತ್ತಾರೆ. ಇದು ಕೈಧಾರೆಯ ಮದುವೆ. ಇದರಲ್ಲಿಯೂ ವಿವಾಹ ವಿಚ್ಛೇದನಕ್ಕೆ ಅವಕಾಶವುಂಟು.

ಇದು ಬ್ರಹ್ಮಚಾರಿಯಾದ ಹುಡುಗನಿಗೂ ಕನ್ನಿಕೆಯಾದ ಹುಡುಗಿಗೂ ನಡೆಯುವ ಮದುವೆಯಾದರೆ. 'ಬುಡುಧಾರೆ' ಎನ್ನುವುದು ವಿಧವೆಯರ ವಿವಾಹ ವಿಧಿ. ವಿಧವಾ ವಿವಾಹ ಅವರಲ್ಲಿ ಬಳಕೆಯಲ್ಲಿದೆ. ಆದರೆ ವಿಧವೆ ಮತ್ತೆ ಮದುವೆಯಾಗುವಾಗ ಮೇಲೆ ಹೇಳಿದ ಪದ್ಧತಿಗಳೆಲ್ಲ ನಡೆಯುವುದಿಲ್ಲ. ನೆರೆದವರು ವಧೂವರರ ಕೈಜೋಡಿಸಿ ಹರಸುವುದಷ್ಟೇ ಇಲ್ಲಿನ ವಿವರ.

## ಬಿಲ್ಲವರಲ್ಲಿ

ತುಳುನಾಡಿನ ಬಿಲ್ಲವರಲ್ಲಿಯೂ ಬಂಟರಲ್ಲಿದ್ದಂತೆ ತಾಯಿಯ ಅನ್ವಯದಿಂದ ಗೊತ್ತಾದ ಬಲಿಭೇದವಿದೆ. ಇವರೂ ಅಳಿಯ ಸಂತಾನ ಕಟ್ಟಿನವರು. ಅವರ ಮದುವೆಯ ನಿಶ್ಚಿತಾರ್ಥದ ಸಮಯದಲ್ಲಿ ಗುಂಪಿನ ಗುರಿಕಾರನೋ ಅಥವಾ ವಧುವಿನ ಸೋದರಮಾವನೋ ವಧುವಿನ ಕೊರಳಿಗೆ ಮುತ್ತಿನ ಮಾಲೆಯೊಂದನ್ನು ಕಟ್ಟುತ್ತಾರೆ. ಧಾರೆಗೆ ಒಂದೆರಡು ದಿನಗಳ ಮುಂಚೆ ಹುಡುಗಿಯ ಕಡೆಯ ಕೆಲವು ಹೆಂಗಸರು ಭೂತಸ್ಥಾನದ ಬಳಿಯ ಕೊಳದಿಂದ (ಅಥವಾ ಬಾವಿಯಿಂದ) ನೀರನ್ನು ತಂದು ಹುಡುಗಿಗೆ ಸ್ನಾನ ಮಾಡಿಸುತ್ತಾರೆ. ಮದುವೆಯ ವಿವರಗಳನ್ನೆಲ್ಲ ಊರ ಕ್ಷೌರಿಕ ನೋಡಿಕೊಳ್ಳಬೇಕೆಂದು ಇಲ್ಲಿನ ಪದ್ಧತಿ. ಧಾರೆಯ ಸಮಯದಲ್ಲಿ ವಧೂವರರ ಕೈ ಜೋಡಿಸುವ ಕೆಲಸವೂ ಅವನದೇ. ಚಪ್ಪರವನ್ನು ಕಟ್ಟಿ ಅದನ್ನು ಸಿಂಗರಿಸುವವನೂ ಅವನೇ.

ಮದುವೆಗೆ ಮುಂಚೆಯೇ ವಧೂವರರು ಕೂಡಿಕೊಂಡಿದ್ದು ವಧುವು ಗರ್ಭಿಣಿಯಾಗಿದ್ದರೆ ಅಂಥ ಸಮಯದಲ್ಲಿ ಬುಡು ಧಾರೆಯ

ಶಾಸ್ತ್ರ ನಡೆಯುತ್ತದೆ ಅಷ್ಟೆ. ಆಗ ವರನು ಬಾಳೆಯ ಗಿಡವೊಂದನ್ನು ಬಲಗೈಯಲ್ಲಿ ಹಿಡಿದು ನಿಂತಾಗ, ನೆರೆದವರು ಅದನ್ನು ಕತ್ತಿಯಿಂದ ಕತ್ತರಿಸುತ್ತಾರೆ. ಬಿಲ್ಲವರಲ್ಲಿ ಮದುವೆಯಾಗದೆ ಹೆಣ್ಣುಮಗಳು ತೀರಿಕೊಂಡರೆ ಅವಳ ಪ್ರೇತ ಮನೆಯನ್ನು ಕಾಡುವುದೆಂಬ ಕಲ್ಪನೆ ಯಿದೆ. ಈ ಕಾಟದಿಂದ ತಪ್ಪಿಸಿಕೊಳ್ಳಲು ಸತ್ತವಳ ನೆಂಟರು ಆ ಊರಿನಲ್ಲಿಯೋ ಪರವೂರಿನಲ್ಲಿಯೋ ಹುಡುಗರು ಯಾರಾದರೂ ತೀರಿಕೊಂಡರೇ ಎಂದು ಹುಡುಕಾಡಿ, ಅಂಥ ಹುಡುಗನೊಬ್ಬನ ಮನೆಯಿಂದ ಒಂದು ಕಾಲಾಣೆ ನಾಣ್ಯವನ್ನು ತಂದು ಎರಡು ಜಮುಖಗಳ ನಡುವೆ ಅದನ್ನು ಸಿಕ್ಕಿಸಿ, ಜಮುಖಗಳನ್ನು ಹುಡುಗಿಯ ಮನೆಯ ಸೂರಿಗೆ ಕಟ್ಟುತ್ತಾರೆ. ಇದು ನಿಶ್ಚಿತಾರ್ಥದ ಸಂಕೇತ. ಅನಂತರ ಮುಹೂರ್ತವೊಂದನ್ನು ಗೊತ್ತುಮಾಡಿ ಅಂದು ನೆಲದ ಮೇಲೆ ಹುಡುಗ–ಹುಡುಗಿಯರನ್ನು ಪ್ರತಿನಿಧಿಸುವಂತೆ ಚಿತ್ರಗಳನ್ನು ಬರೆದು ಅವರ ಕೈಗಳ ಮೇಲೆ ಹಣ, ಕರಿಮಣಿ, ಬಳೆಗಳು, ಮೂಗುತಿ ಇವುಗಳನ್ನಿಟ್ಟು ನೀರು ಸುರಿಯುತ್ತಾರೆ. ಇದು ಧಾರೆಯ ಸಂಕೇತ.

## ಮರ್ಯಾದೆ ನೀರು

ತುಳುನಾಡಿನಲ್ಲಿಯೇ ಪದ್ಮಸಾಲಿ—ಬಿಳಿಮಗ್ಗದವರೆಂಬ ಜನ ಇದ್ದಾರೆ. ಮೂವಲಿಗೆ ಇವರು ತಮಿಳು ದೇಶದವರಂತೆ. ಅವರ ಮಾತಿನಲ್ಲಿ ತಮಿಳಿನ ಅಪಭ್ರಂಶವೇನೋ ಉಂಟು. ಇವರು ಅಳಿಯಸಂತಾನ ಕಟ್ಟಿಗೆ ಸೇರಿಲ್ಲ; ಅವರದ್ದು ಗಂಡು ಮಕ್ಕಳ ಸಂತಾನ. ವೀರಭದ್ರ, ಬ್ರಹ್ಮಲಿಂಗ ಮತ್ತು ಅಮ್ಮನವರನ್ನು ಪೂಜಿಸುವ ಇವರು ಹೆಚ್ಚಾಗಿ ಉಡುಪಿ, ಕುಂದಾಪುರ, ಮಂಗಳೂರು ಕಡೆ ಇದ್ದಾರೆ. ಇವರ ಮದುವೆಯಲ್ಲಿ ಕೆಲವು ವಿಚಿತ್ರ ಪದ್ಧತಿ ಗಳಿವೆ. ಮದುವೆಯ ದಿನ 'ಮರ್ಯಾದೆ ನೀರು' ಎನಿಸಿಕೊಳ್ಳುವ

ವಿಧಿ ನಡೆಯುತ್ತದೆ. ವೀಳ್ಯದ ಶಾಸ್ತ್ರವಾದ ನಂತರ ಬೀಗರೆಲ್ಲರೂ ವರನ ಮನೆಗೆ ತೆರಳುವಾಗ ಹುಡುಗಿಯ ತಂದೆ ಹಿತ್ತಾಳೆ ಕೊಡವೊಂದರಲ್ಲಿ ನೀರನ್ನು ಹೊತ್ತು ತರುತ್ತಾನೆ. ಐದು, ಏಳು ಹೀಗೆ ಬೆಸ ಸಂಖ್ಯೆಯಲ್ಲಿ ಹೆಂಗಸರು ಈ ನೀರನ್ನು ಚಿಕ್ಕ ಚಿಕ್ಕ ಪಾತ್ರೆಗಳಿಗೆ ಸುರಿಯುತ್ತಾರೆ. ಈ ನೀರನ್ನು ಅನಂತರ ಆ ಹೆಂಗಸರು ವರನ ತಲೆಯ ಮೇಲೆ ಸುರಿಯುತ್ತಾರೆ.

ವಧೂವರರಿಗೆ ಬಾಸಿಂಗ ಕಟ್ಟಿ ಸಿಂಗರಿಸಿ, ವಧುವಿಗೆ ತಾಳಿ ಬಂಧನವೂ ಆದನಂತರ 'ಮಂಚಪೂಜೆ'ಯ ಶಾಸ್ತ್ರ ನಡೆಯುತ್ತದೆ. ಮಂಚವೊಂದರ ಇಕ್ಕೆಲಗಳಲ್ಲಿ ವಧೂವರರೂ ಅವರವರ ಬೀಗರೂ ನಿಂತು ಅಕ್ಕಿಯನ್ನು ಎಸೆದಾಡುತ್ತಾರೆ. ವರನ ತಂದೆಯು ಮಂಚಕ್ಕೆ ಕರ್ಪೂರದಾರತಿ ಮಾಡುತ್ತಾನೆ. ವಧುವಿನ ತಂದೆ ವರನ ಕೈ ಹಿಡಿದು ನಿಂತು ಆರತಿ ಮಾಡಿಸಿಕೊಳ್ಳುತ್ತಾನೆ. ಅನಂತರ ವರನು ಮಂಚದ ಸುತ್ತ ಏಳು ಪ್ರದಕ್ಷಿಣೆ ಮಾಡುತ್ತಾನೆ. ವಧುವಿಗೆ ತಾಳಿ ಕಟ್ಟುವ ಶಾಸ್ತ್ರ ವರನಿಂದ ನಡೆಯುವುದಿಲ್ಲ; ವರನ ಸೋದರಿ ಇದನ್ನು ಮಾಡುತ್ತಾಳೆ.

'ಮಂಚಪೂಜೆ' ನಡೆದ ಮೇಲೆ 'ದೇವಗಿರಿ–ಉಡುಗೊರೆ' ಎಂಬ ವಿಧಿ ನಡೆಯುತ್ತದೆ. ವಧುವು ಮನೆಯ ಒಳಗೆ ಸೇರಿ ಕೋಣೆಯೊಂದರಲ್ಲಿ ಕಾಲ ಪೆಪ್ಪೆರಳುಗಳನ್ನು ಹಿಡಿದು ಪದ್ಮಾಸನ ಹಾಕಿ ಕೂಡುತ್ತಾಳೆ. ಅವಳ ಸೋದರಮಾವನು ಕೆಂಪು ವಸ್ತ್ರವೊಂದನ್ನು ಅವಳ ಮೇಲೆ ಹಾಕುತ್ತಾನೆ. ಇವನಿಗೆ ವರನ ಸೋದರಮಾವನು ಉಡುಗೊರೆಯಾಗಿ ಕೊಟ್ಟ ವಸ್ತ್ರ ಇದು. ವಧುವು ಅದರಿಂದ ತನ್ನ ಮುಖವನ್ನು ಮುಚ್ಚಿಕೊಳ್ಳುತ್ತಾಳೆ. ಇಷ್ಟಾದ ಮೇಲೆ ಸೋದರಮಾವನು ಅವಳನ್ನು ಮತ್ತೆ ಮದುವೆಯ ಚಪ್ಪರಕ್ಕೆ ಕರೆತಂದು ಗುರಿಕಾರನಿಗೆ ಕನ್ಯಾಶುಲ್ಕವನ್ನು ಕೊಟ್ಟು ಧಾರೆ

ನಡೆಸಬೇಕೆಂದು ನೆರದವರನ್ನು ಕೇಳಿಕೊಳ್ಳುತ್ತಾನೆ. ಅವರು ಒಪ್ಪಿದ ಮೇಲೆ ವಧೂವರರ ಸೋದರಮಾವಂದರು ವಧೂವರರ ಕೈ ಸೇರಿಸುತ್ತಾರೆ. ಆಗ ವಧುವು ಅಲ್ಲಿಯುವರೆಗೂ ತನ್ನ ಮುಖವನ್ನು ಮುಚ್ಚಿದ್ದ ವಸ್ತ್ರವನ್ನು ತೆಗೆಯುತ್ತಾಳೆ. ಮೊದಲು ವಧುವಿನ ತಂದೆಯೂ. ಅನಂತರ ಗುರಿಕಾರನೂ ಧಾರೆಯ ನೀರನ್ನು ಸುರಿಯುತ್ತಾರೆ. ಉಳಿದವರು ಅಕ್ಕಿಯ ಕಾಳುಗಳನ್ನು ವಧೂವರರ ಮೇಲೆ ಎಸೆಯುತ್ತಾರೆ.

ಇವೆಲ್ಲ ಮುಗಿದ ನಂತರ ವಧೂವರರು ಪೂಜೆಗೊಂಡ ಮಂಚದ ಮೇಲೆ ಕುಳಿತು ಆರತಿ ಮಾಡಿಸಿಕೊಳ್ಳುತ್ತಾರೆ. ಆರತಿ ತಟ್ಟೆಯಲ್ಲಿರುವ ಅರಿಶಿನದ ನೀರಿನಲ್ಲಿ ವರನು ಉಂಗುರವೊಂದನ್ನು ಹಾಕಿ ವಧೂವರರಿಬ್ಬರೂ ಅದನ್ನು ಹುಡುಕಿ ತೆಗೆಯುವಂತೆ ನಟಿಸುತ್ತಾರೆ. ಓಕಳಿಯಾಟದಲ್ಲಿ ಮದುವೆ ಮುಗಿಯುತ್ತದೆ.

## 7. ಕೇರಳದ ಪದ್ಧತಿಗಳು

ಸುಸಂಸ್ಕೃತರು, ಸಭ್ಯರು ಎನಿಸಿಕೊಳ್ಳುವ ಹಿಂದೂ ಜನಾಂಗ ಗಳಲ್ಲಿ ಹೆಚ್ಚು ಕಡಿಮೆ ವೈದಿಕ ವಿವಾಹಗಳು ದೇಶದಾದ್ಯಂತವೂ ಬಳಕೆಯುಲ್ಲಿವೆ. ದೇಶಾಚಾರ, ಕುಲಾಚಾರ, ಜಾತ್ಯಾಚಾರಗಳಿಂದ ಹಲವಾರು ವೈವಿಧ್ಯಗಳು ಒದಗಿವೆಯಾದರೂ ಮುಖ್ಯ ವಿಧಿಗಳೂ ಮಂತ್ರಗಳೂ ಆಶಯ-ನಿರ್ಬಂಧಗಳೂ ಸರ್ವ ಸಾಮಾನ್ಯವಾಗಿವೆ. ಕೇರಳದ ನಂಬೂದಿರಿ ಬ್ರಾಹ್ಮಣರಲ್ಲೂ ಬಂಗಾಳದ ಬ್ರಾಹ್ಮಣರಲ್ಲೂ, ಮಹಾರಾಷ್ಟ್ರ ಕ್ಷತ್ರಿಯರಲ್ಲೂ ರಾಜಾಸ್ಥಾನದ ರಾಜನ್ಯರಲ್ಲೂ ಒಂದೇ ವಿಧಿಗಳು ಪ್ರವೃತ್ತವಾಗಿವೆ ಎಂದಮೇಲೆ ವೈದಿಕ ವಿಧಿಗಳ ಪ್ರಭಾವ ಅರ್ಥವಾಗುತ್ತದೆ. ಆದರೆ ಆರ್ಯ ಸಂಸ್ಕೃತಿಯ ಪ್ರಭಾವ ವನ್ನು ಅಷ್ಟಾಗಿ ಅರಗಿಸಿಕೊಳ್ಳದ ಪಂಗಡಗಳಲ್ಲಿ ಪ್ರಾಚೀನ ಪದ್ಧತಿಗಳು ಉಳಿದುಬಂದಿವೆ. ಆದಿವಾಸಿಗಳು, ಗಿರಿಜನರು, ಕಾಡು ಕುರುಬರು, ಬೆಸ್ತರು ಮುಂತಾದ ಗುಂಪುಗಳಲ್ಲಿ ನಮಗೆ ವಿಲಕ್ಷಣವೆಂದು ಕಂಡುಬರುವ ಪದ್ಧತಿಗಳು ಬಳಕೆಯುಲ್ಲಿವೆ. ಸಭ್ಯ ಜನರಾದರೂ ಆರ್ಯ ಸಂಸ್ಕೃತಿಯನ್ನು ದೂರ ಇರಿಸಿ ತಮ್ಮದೇ ವಿಶಿಷ್ಟವಾದ ಸಂಪ್ರದಾಯಗಳನ್ನು ಉಳಿಸಿಕೊಂಡು ಬಂದಿರುವ ದ್ರಾವಿಡ ಜನರಲ್ಲಿಯೂ ಇಂಥದೇ ವಿಚಿತ್ರ ಪದ್ಧತಿ ಗಳಿವೆ.

### ಅವಸರದ ಮದುವೆ

ಕೇರಳದಲ್ಲಿ ಮಾತೃಪ್ರಧಾನವಾದ ಸಮಾಜ ವ್ಯವಸ್ಥೆಯಿದ್ದಿತಾಗಿ ಹಲವಾರು ವಿಶಿಷ್ಟ ಪದ್ಧತಿಗಳು ಅಲ್ಲಿ ಕಾಣುತ್ತವೆ. ಅಲ್ಲಿನ ನಾಯರ್‌ಜನ ಅನೇಕಪತಿ ಪದ್ಧತಿಯನ್ನು ಅನುಸರಿಸುತ್ತಿದ್ದರು.

ಅವರಲ್ಲಿ ಎರಡು ಬಗೆಯ ವಿವಾಹಗಳು ಬಳಕೆಯಲ್ಲಿವೆ. ಹುಡುಗಿ ಮೈನೆರೆಯುವ ಮುನ್ನ ಅವಳಿಗೆ ಮದುವೆ ಮಾಡುವ ಹೊಣೆ ಹುಡುಗಿಯ ತಾಯಿಯದು. ಮದುವೆಯಾಗದೆ ಮೈ ನೆರೆದರೆ ಹುಡುಗಿಯ ತಾಯಿ ಅಪವಾದಕ್ಕೆ, ಅವಮಾನಕ್ಕೆ ಈಡಾಗುತ್ತಾಳೆ. ಈ ಅಪಕೀರ್ತಿಯನ್ನು ತಪ್ಪಿಸಲು, ಆಕೆ ಅವಸರ ದಲ್ಲಿ 'ತಾಳಿ ಕಟ್ಟು ಕಲ್ಯಾಣಂ' ಎಂಬ ವಿಧಿಯನ್ನು ಮಾಡಿ ಮುಗಿಸು ತ್ತಾಳೆ.

ಇದರಲ್ಲಿ ಪುರೋಹಿತನಾಗಲೀ, ಮಂತ್ರಗಳಾಗಲೀ ಇರುವುದಿಲ್ಲ. ಹುಡುಗಿಯ ಕೊರಳಿಗೆ ತಾಳಿಯನ್ನು ಕಟ್ಟುವುದೇ ಈ ಕಲ್ಯಾಣದ ಮುಖ್ಯ ವಿವರ. ಹೀಗೆ ತಾಳಿಯನ್ನು ಕಟ್ಟುವ ಗಂಡ ಪರಿಚಿತ ನಾಗಿರಬೇಕೆಂಬ ನಿಯಮವಿಲ್ಲ; ತಾಳಿ ಕಟ್ಟಿದ ಮಾತ್ರಕ್ಕೆ ಅವನಿಗೆ ವೈವಾಹಿಕ ಅಧಿಕಾರವೇನೂ ಬರದು. ವಿಧಿ ನಡೆದೊಡನೆ ಅವನು ಹುಡುಗಿಯನ್ನು ಬಿಟ್ಟು ಹೋಗುತ್ತಾನೆ. ಮತ್ತೆ ಅವನಿಗೂ ಹುಡುಗಿಗೂ ಯಾವ ಸಂಬಂಧವೂ ಇರದು. ಹುಡುಗಿಯು ತಾಯಿಯ ಮನೆಯಲ್ಲಿಯೇ ಬೆಳೆದು ದೊಡ್ಡವಳಾದ ಮೇಲೆ ನಡೆಯುವ ಮದುವೆ 'ಸಂಬಂಧ'ವೆನಿಸಿಕೊಳ್ಳುತ್ತದೆ. ಇದೇ ನಿಜ ವಾದ ವಿವಾಹ. ಇಲ್ಲಿ ಒದಗಿದ ಸಂಬಂಧ ಉಳಿಯತಕ್ಕದ್ದು. ಈ ಕಾಲದಲ್ಲಿ 'ತಾಳಿ ಕಟ್ಟು ಕಲ್ಯಾಣ' ವನ್ನು ನೆಪ ಮಾತ್ರಕ್ಕೆ 'ಸಂಬಂಧ'ದ ಸಂದರ್ಭದಲ್ಲಿಯೇ ಸೇರಿಸುತ್ತಾರೆ.

## ಸಮೂಹ ವಿವಾಹ

ಮರುಮಕ್ಕತ್ತಾಯಂ ಪದ್ಧತಿಯು ಪ್ರಚುರವಾಗಿರುವ ಕೇರ ಳೀಯ ಪಂಗಡಗಳಲ್ಲಿ ತಾಯಿಯೂ ಅವಳ ಮಕ್ಕಳೂ ಅವಳ ಸೋದರ ಸೋದರಿಯರೂ ಒಂದೇ ಮನೆಯಲ್ಲಿ ಇರುತ್ತಾರೆ. ಅಣ್ಣನ ಹೆಂಡತಿಯು ಅವನ ತಮ್ಮಂದಿರೊಡನೆ ಹೆಂಡತಿಯಂತೆ

ವಿಹರಿಸುವುದು ಅನುಚಿತವೆಂದು ಪರಿಗಣಿತವಾಗಿರಲಿಲ್ಲ. ಸ್ತ್ರೀ ಪ್ರಧಾನವಾದ ಈ ಸಮಾಜದಲ್ಲಿ ಅನೇಕಪತಿ ಪದ್ಧತಿ ಬಳಕೆಯಲ್ಲಿ ದ್ದುದು ಸಹಜವೇ. ಆದರೆ ಈ ಕಾಲದಲ್ಲಿ ಈ ಪದ್ಧತಿಗಳು ಬಹು ಮಟ್ಟಿಗೆ ಮರೆಯಾಗಿವೆ.

ಕೇರಳದ ಊರಾಳಿ, ಮಲಪ್ಪುಳಯ, ಪುಲಿಯನ್, ಮುತ್ತುವನ್, ಮನ್ನನ್, ಉಲ್ಲಾತನ್, ಪರಯ ಮುಂತಾದ ಪಂಗಡಗಳಲ್ಲಿ ಅನೇಕ-ಪತಿ ಪದ್ಧತಿಯು ಇನ್ನೂ ಬಳಕೆಯಲ್ಲಿದೆ. ಇವರಲ್ಲದೆ ಸಂತಾಲರು, ಭುಯ್ಯರು, ಕಂಧರು. ಓರ ಒನರು, ಕೊರ್ಕುಗಳು, ತೋಡರು, ಟಿಬೆಟ್ ಜನ ಇವರಲ್ಲಿ ಇದೇ ಪದ್ಧತಿ ಇದೆ. ನೀಲಗಿರಿಯ ತೋಡರಲ್ಲಿ ಮತ್ತು ಟಿಬೆಟ್ ಜನರಲ್ಲಿ ಸೋದರರೆಲ್ಲ ಬೇರೆ ಬೇರೆ ಯಾಗಿ ಮದುವೆಯಾದರೂ ಯಾವ ಸೋದರನೂ ಯಾವ ಅತ್ತಿಗೆ ಯನ್ನು ಬೇಕಾದರೂ ಕೂಡಿಕೊಳ್ಳಬಹುದು. ಸೋದರರೆಲ್ಲ ಒಂದು ಗುಂಪು; ಮಡದಿಯರೆಲ್ಲ ಇನ್ನೊಂದು ಗುಂಪು. ಗುಂಪಿನಲ್ಲಿ ಯಾರು ಯಾರನ್ನಾದರೂ ಭೋಗಿಸಲು ನಿರ್ಬಂಧವಿಲ್ಲ. ವಿವಾಹ ಬಂಧವು ಗುಂಪುಗಳಿಗೆ ಸೀಮಿತವಾದದ್ದಷ್ಟೆ. ಇಂಥ ಪದ್ಧತಿಯು ಕೇರಳದ ಜನಾಂಗಗಳಲ್ಲಿಯೂ ಪ್ರಚಲಿತವಾಗಿದ್ದಿತು. ಅನೇಕಪತ್ನೀ ಗಮನ ಮತ್ತು ಬಹುಪತಿ ಶೀಲ ಪದ್ಧತಿಗಳೆರಡರ ಸಮನ್ವಯವು ಈ ಸಮೂಹ ವಿವಾಹ ಪದ್ಧತಿಗೆ ಕಾರಣವೆಂದು ಕೆಲವು ತಜ್ಞರ ವಿವರಣೆ.

## ಅಣ್ಣನ ನಂತರ

ಕೇರಳದಲ್ಲಿ ಬಳಕೆಯಲ್ಲಿರುವ ಮತ್ತೊಂದು ಪದ್ಧತಿ ಇಂಗ್ಲಿಷಿನಲ್ಲಿ ಲೆವಿರೇಟ್ ಎನಿಸಿಕೊಳ್ಳುತ್ತದೆ. ಅಣ್ಣನು ತೀರಿಕೊಂಡಾಗ ಅವನ ಹೆಂಡತಿಯನ್ನು ಅವನ ತಮ್ಮನು ಇಟ್ಟುಕೊಳ್ಳುವ ಅಥವಾ ವಿಧ್ಯುಕ್ತವಾಗಿ ವರಿಸುವ, ಪದ್ಧತಿಯು ಇಷುವ, ತಂದನ್, ಪನನ್,

ಪುಲಯ, ಪರಯ, ಈ ಪಂಗಡಗಳಲ್ಲಿ ಇಂದಿಗೂ ಪ್ರಚಲಿತವಾಗಿದೆ. ಮದ್ರಾಸ್ ಪ್ರಾಂತ್ಯದ ಕೆಲವು ಪಂಗಡಗಳಲ್ಲಿಯೂ ಈ ಪದ್ಧತಿಯಿದೆ. ಯೆಹೂದ್ಯರಲ್ಲಿ ತುಂಬ ಬಳಕೆಯಲ್ಲಿದ್ದ ಈ ಪದ್ಧತಿ ಪಾಶ್ಚಾತ್ಯ ದೇಶಗಳಲ್ಲಿ ಒಮ್ಮೆ ವಿಸ್ತೃತವಾಗಿದ್ದಿತೆಂದು ತಿಳಿದು ಬರುತ್ತದೆ. ಹೆಂಗಸರ ಸಂಖ್ಯೆ ಗಂಡಸರ ಸಂಖ್ಯೆಗಿಂತ ಕಡಿಮೆಯಿದ್ದಾಗ ಬಹುಪತಿಶೀಲಪದ್ಧತಿ, ಸಮೂಹ ವಿವಾಹ, ಭ್ರಾತೃಜ್ಯಾಯಾಗಮನ ಅಥವಾ ಲೆವಿರೆಟ್ ಪದ್ಧತಿಗಳು ಅನಿವಾರ್ಯವಾಗಿ ಒದಗುವುದೆಂದು ಹೇಳುತ್ತಾರೆ.

ಕೇರಳದ ಜನರಲ್ಲಿ ಬಹುಮಟ್ಟಿಗೆ ಧರ್ಮಶಾಸ್ತ್ರದ ವಿವಾಹ ವಿಧಿಗಳು ಪ್ರವೃತ್ತವಾಗಿಲ್ಲ. ಬ್ರಾಹ್ಮಣರು ಮತ್ತೆ ಕೆಲವೇ ಇತರ ಪಂಗಡಗಳಲ್ಲಿ, ದೇಶದ ಉಳಿದೆಡೆ ಇರುವಂತೆ ಪುರುಷ ಪ್ರಧಾನವಾದ ಸಾಮಾಜಿಕ ವ್ಯವಸ್ಥೆ (ಮಕ್ಕತ್ತಾಯಂ) ಇದ್ದು ವಿವಾಹವು ಅನುಲ್ಲಂಘ್ಯವಾದ, ಅಚ್ಛೇದ್ಯವಾದ ವಿಧಿಯೆಂಬ ಕಲ್ಪನೆಯಿದೆ. ಇದರಲ್ಲಿ ವಧೂವರರು ಸಗೋತ್ರ, ಸಪಿಂಡವಾಗಿರಬಾರದು ಎಂಬ ನಿಯಮವುಂಟು. ವೈದಿಕ ಮಂತ್ರಗಳನ್ನು ಬಳಸಿ ಅಗ್ನಿ ಪರಿಣಯದ ವಿವರಗಳನ್ನೇ ಇವರೂ ಅನುಸರಿಸುತ್ತಾರೆ. ಕೇರಳ ಬ್ರಾಹ್ಮಣರಾದ ನಂಬೂದಿರಿಗಳು ಆರು ದಿನಗಳ ಮದುವೆಯನ್ನು ಮಾಡುತ್ತಾರೆ. ಕನ್ಯಾ ದಾನ, ಅಷ್ಟ ಮಾಂಗಲ್ಯ, ವಿವಾಹ ಹೋಮ, ಸಪ್ತಪದಿ, ನಾಂದೀ ಮುಖ, ಮಂಟಪಪೂಜೆ ಮುಂತಾದ ವಿವರಗಳು ಇವರ ವಿವಾಹದಲ್ಲೂ ಉಂಟು.

ಆದರೆ ಮದುವೆಯ ಸಂದರ್ಭದಲ್ಲಿ ನಂಬೂದಿರಿ ಹೆಂಗಸರು ತೆರೆಯ ಹಿಂದಿದ್ದು ನಾಯರ್ ಹೆಂಗಸರು ಅವರ ಪರವಾಗಿ ಭಾಗವಹಿಸುವುದು ಒಂದು ವೈಶಿಷ್ಟ್ಯ. ಮದುವೆಯ ಐದನೆಯ ದಿನ ವಧೂವರರಿಬ್ಬರೂ ಪರಸ್ಪರ ಎಣ್ಣೆ ಒತ್ತಿ ಸ್ನಾನ ಮಾಡಿಸುವ

ಪದ್ಧತಿಯಿದೆ. ಸ್ನಾನಕ್ಕೆ ಮುಂಚೆ ಕೊಳದಲ್ಲಿ ಇಬ್ಬರೂ ಬಟ್ಟೆ ಹರಡಿ 'ಮನ್ನತ್‌ಕನ್ನಿ' ಎನಿಸಿಕೊಳ್ಳುವ ಸಣ್ಣ ಮೀನುಗಳನ್ನು ಹಿಡಿಯುತ್ತಾರೆ. ಮೀನು ಸಂತಾನಸೌಭಾಗ್ಯದ ಸಂಕೇತವೆಂಬ ಕಲ್ಪನೆ ಬಂಗಾಳಿ ಜನರಲ್ಲಿರುವಂತೆ ಇವರಲ್ಲಿಯೂ ಇದೆ. ಆ ರಾತ್ರಿ ವರನೇ ವಧುವನ್ನು ಹೂಗಳಿಂದ ಸಿಂಗರಿಸಿ ಅವಳ ಮುಂದೆ ಕನ್ನಡಿಯನ್ನು ಹಿಡಿದು ವೈದಿಕ ಮಂತ್ರಗಳನ್ನು ಪಠಿಸುತ್ತಾನೆ. ಇಂಥ ಹಲವಾರು ತಾಂತ್ರಿಕ ಕ್ರಿಯೆಗಳು ಇವರಲ್ಲಿ ಬಳಕೆಯಲ್ಲಿವೆ.

ಮನೆಯಲ್ಲಿ ಹಿರಿಯ ಮಗನು ನಂಬೂದಿರಿ ಹುಡುಗಿಯನ್ನೇ ಮದುವೆಯಾಗಬೇಕೆಂದೂ ಉಳಿದ ಗಂಡುಮಕ್ಕಳು ಕ್ಷತ್ರಿಯ ಅಥವಾ ನಾಯರ್ ಹುಡುಗಿಯರನ್ನು ಮದುವೆಯಾಗಬೇಕೆಂದೂ ನಿಯಮವಿದ್ದಿತಾಗಿ ನಂಬೂದಿರಿ ಹೆಂಗಸರು ಬಹುಮಂದಿ ಅವಿವಾಹಿತರಾಗಿಯೇ ಉಳಿಯುತ್ತಾರೆ. ಆದರೆ ಅವಿವಾಹಿತ ಸ್ತ್ರೀಗೆ ಸ್ವರ್ಗವು ಸಿಗದೆಂಬ ನಂಬಿಕೆಯಿರುವುದರಿಂದ ಮದುವೆಯಿಲ್ಲದೆ ಸತ್ತ ಹೆಂಗಸನ್ನು ಸುಡುವ ಮುನ್ನ ಆಕೆಯ ಕೊರಳಿಗೆ ತಾಳಿಯನ್ನು ಕಟ್ಟಿ ವಿವಾಹ ವಿಧಿಯನ್ನು ಸೂಕ್ಷ್ಮವಾಗಿ ಮುಗಿಸುತ್ತಾರೆ. ಸಮಾಜದ ವ್ಯವಸ್ಥೆಯಲ್ಲೇನೋ ವಿವಾಹ ಇಲ್ಲದೆ ಉಳಿದ ಹೆಂಗಸಿಗೆ ಯಾವ ಬಗೆಯ ಕಳಂಕವೂ ಇರದು.

ವರದಕ್ಷಿಣೆ ಪದ್ಧತಿ ನಂಬೂದಿರಿಯರಲ್ಲಿ ವಿಶೇಷವಾಗಿ ಹರಡಿದೆ. ಈಚೀಚೆಗೆ ಇದು ಇಷವ, ವೆಲ್ಲಾಳ, ನಾಯರ್ ಜನಾಂಗಗಳಲ್ಲಿಯೂ ಕಾಣಬರುತ್ತಿದೆ.

### ಭೂಮುದೂಟ

ನಂಬೂದಿರಿಯರನ್ನು ಬಿಟ್ಟು ಉಳಿದ ಮಲೆಯಾಳೀ ಪಂಗಡಗಳಲ್ಲಿ ವಿವಾಹವು ಧಾರ್ಮಿಕ, ವೈದಿಕ ಸಂಸ್ಕಾರವೆಂಬ ಕಲ್ಪನೆಯಿಲ್ಲ. ವಧೂವರರು ಒಂದೇ ಕುಲಕ್ಕೆ ಸೇರಿದ್ದು ವಂಶದಲ್ಲಿ ಭಿನ್ನರಾಗಿರ

ಬೇಕೆಂಬ ನಿಯಮ ಇವರಲ್ಲೂ ಉಂಟು. ಇವರ ಮದುವೆಯ ವಿಧಿಗಳಲ್ಲಿ ವೈದಿಕ ಮಂತ್ರಗಳ ಬಳಕೆಯಿಲ್ಲ. ಎರಡೂ ಕಡೆಯವರು ಪರಸ್ಪರ ವಸ್ತ್ರಗಳನ್ನು ಕೊಡುವುದು, ಒಟ್ಟಿಗೆ ಊಟ ಮಾಡುವುದು. ವರನು ವಧುವಿಗೆ ತಾಳಿಯನ್ನು ಕಟ್ಟುವುದು ಮುಖ್ಯವಾದ ವಿವರಗಳು. ಒಂದೇ ಚಾಪೆಯ ಮೇಲೆ ವಧೂವರರು ಎದುರುಬದರಾಗಿ ಕುಳಿತು ಮಧ್ಯೆ ಇಟ್ಟ ತಳಿಗೆಯಿಂದ ಅನ್ನದ ಉಂಡೆಯೊಂದನ್ನು ವರನು ವಧುವಿಗೆ ಕೊಟ್ಟು ತಿನಿಸುತ್ತಾನೆ. ಅನಂತರ ವಧುವು ವರನಿಗೆ ಇನ್ನೊಂದು ಉಂಡೆಯೊಂದನ್ನು ಕೊಡುತ್ತಾಳೆ. ಮಲಪನ್ತರಂ ಜನಾಂಗದಲ್ಲಿ ವಧುವಿನ ತಂದೆಯು ಮಗಳ ಬಲಗೈಯನ್ನೂ ವರನ ಎಡಗೈಯನ್ನೂ ಸೇರಿಸಿ "ನನ್ನ ಮಗಳನ್ನು ನಿನಗೆ ಒಪ್ಪಿಸುತ್ತಿದ್ದೇನೆ" ಎಂದು ಹೇಳುವ ವಾಡಿಕೆಯಿದೆ. ಹೀಗೆ ಹೇಳಿದ ನಂತರ ವರನ ಸೋದರಿಯು ನಾಲ್ಕು ಅನ್ನದುಂಡೆಗಳನ್ನಿಟ್ಟ ತಳಿಗೆಯನ್ನು ತಂದು ವಧೂವರರ ಮುಂದಿಡುತ್ತಾಳೆ. ಮೊದಲು ವಧುವು ವರನಿಗೆ ಎರಡು ಉಂಡೆಗಳನ್ನು ಉಣಿಸುತ್ತಾಳೆ, ಆಮೇಲೆ ವರನು ಅವಳಿಗೆ ಉಳಿದೆರಡು ಉಂಡೆಗಳನ್ನು ಉಣಿಸುತ್ತಾನೆ.

ಹೀಗೆ ವಧೂವರರು ಕೈ ಹಿಡಿಯುವುದು, ಪರಸ್ಪರ ಉಣಿಸುವುದು ವಿವಾಹ ಬಂಧನದ ಮುಖ್ಯ ವಿವರಗಳು. ಕಣಿಕ್ಕಾರ ಪಂಗಡದಲ್ಲಿ ಇಬ್ಬರು ಹೆಂಗಸರು ವಧುವಿನ ತಲೆಯನ್ನು ವರನ ಭುಜಕ್ಕೆ ತಾಗಿಸಿ ಹಳು ಬಾರಿ ಒತ್ತುವ ಪದ್ಧತಿಯಿದೆ. ಅನಂತರ ವರನು ಅನ್ನವನ್ನು ಏಳು ಬಾರಿ ವಧುವಿನ ಬಾಯಿಗೆ ಹಾಕಿ ಉಣಿಸುತ್ತಾನೆ. ಕೆಲವು ಜನರಲ್ಲಿ ತಾಂಬೂಲ ಚರ್ವಣವು ಪ್ರಮುಖವಾದ ಕ್ರಿಯೆ. ಮಲಯರಯನ್ ಜನರಲ್ಲಿ ತಾಳಿ ಕಟ್ಟಿಯಾದ ಮೇಲೆ ವಧುವಿನ ಸೋದರನು ವಧುವಿಗೆ ಒಂದು

ವೀಳ್ಯದೆಲೆಯನ್ನು ಕೊಡುತ್ತಾನೆ; ಆಕೆ ಅದನ್ನು ಎರಡಾಗಿ ಸೀಳಿ ಒಂದು ಸೀಳನ್ನು ತನ್ನ ವರನಿಗೆ ಕೊಟ್ಟು ಇನ್ನೊಂದನ್ನು ತಾನು ಅಗಿಯುತ್ತಾಳೆ. ಇಬ್ಬರೂ ಒಂದೇ ಪೀಕುದಾನಿಯಲ್ಲಿ ಚರ್ವಿತ ಗಳನ್ನು ಉಗುಳುತ್ತಾರೆ. ಅನಂತರ ವಧೂವರರಿಬ್ಬರೂ ಒಂದೇ ತಳಿಗೆಯಲ್ಲಿ ಉಣ್ಣುತ್ತಾರೆ. ನಮ್ಮಲ್ಲಿಯೂ ಪಾಣಿಗ್ರಹಣದ ರಾತ್ರಿ ಯೂ ಮರುದಿನವೂ ವಧೂವರರು ಭೂಮದೂಟ ಮಾಡುವ ಪದ್ಧತಿಯಿದೆಯಷ್ಟೆ.

ಮುತ್ತುವನ್ ಜನರಲ್ಲಿ ಮದುವೆ ಆಗುವಾಗ ಹುಡುಗಿಯ ತಂದೆತಾಯಿಯರು ಅಲ್ಲಿರಬಾರದು ಎಂಬ ನಿಯಮವಿದೆ. ಮದುವೆಯೇನೋ ಹುಡುಗಿಯ ಮನೆಯಲ್ಲಿಯೇ ನಡೆಯುತ್ತದೆ. ವರನಾದವನು ಅಲ್ಲಿಗೆ ಬಂದು ಹುಡುಗಿಗೆ ಹಲವಾರು ವಸ್ತುಗಳನ್ನು ತಂದುಕೊಡುತ್ತಾನೆ; ಇವುಗಳಲ್ಲಿ ಬಿದಿರಿನ ಬಾಚಣಿಕೆಯೊಂದು ಮುಖ್ಯವಾದ ಕೊಡುಗೆ. ಮದುವೆಯಾದ ಹೆಂಗಸರು ತಮ್ಮ ತಲೆತುರುಬಿನಲ್ಲಿ ಹೀಗೆ ತಮಗೆ ಕೊಡಲ್ಪಟ್ಟ ಬಾಚಣಿಕೆಯನ್ನು ಎಲ್ಲ ಕಾಲಗಳಲ್ಲಿಯೂ ಸಿಕ್ಕಿಸಿಕೊಂಡೇ ಇರುತ್ತಾರೆ. ಈ ಜನರಲ್ಲಿ ಮಾತ್ರವಲ್ಲದೆ ಕೊಚ್ಚಿಯ ಕಾಡಾರ್ ಜನರಲ್ಲಿಯೂ ಮಲಯದ ಸೆಮೂಂಗ್ ಜನರಲ್ಲಿಯೂ ಛೋಟಾ ನಾಗಪುರದ ಓರಬನ್ ಜನರಲ್ಲಿಯೂ ಇದೇ ಪದ್ಧತಿಯಿರುವುದು ಗಮನಾರ್ಹ.

**ಗುಟ್ಟಿನ ಮದುವೆ**

ಸಾಮಾನ್ಯವಾಗಿ ಈ ದ್ರಾವಿಡ ಜನರಲ್ಲಿ ಮದುವೆಯು ಸಂಜೆ ಯಂದು, ಅಥವಾ ರಾತ್ರಿಯಾದ ಮೇಲೆ ನಡೆಯುತ್ತದೆ. ಮುತ್ತುವನ್ ಜನರ ಮದುವೆ ಸಂಜೆಯ ಸಮಾರಂಭ; ಮಲಯ ರಯನ್, ಮಲಪ್ಪುಳಯನ್, ಮನ್ನನ್, ಪಳಿಯನ್, ಮಲಪಂತರಂ ಈ ಜನರಲ್ಲಿ ರಾತ್ರಿಯ ಸಮಾರಂಭ. ಹಗಲು ವೇಳೆ ದೃಷ್ಟಿಯ

ದೋಷ ತಾಕುವುದು ಬೇಕೆಂದೂ ವಧೂವರರನ್ನು ಈ ದೃಷ್ಟಿ ದೋಷದಿಂದ ತಪ್ಪಿಸಲು ಕತ್ತಲಲ್ಲಿ, ಎಂದರೆ ಗುಟ್ಟಾಗಿ ಮದುವೆ ಮಾಡುವ ಪದ್ಧತಿ ಬಂದಿದೆ ಎಂದೂ ವಿವರಣೆಯಿದೆ.

## ಕ್ರೈಸ್ತರಲ್ಲಿ ಪದ್ಧತಿ

ಕೇರಳದ ಸಿರಿಯನ್ ಕ್ರೈಸ್ತ ಜನರಲ್ಲಿ ರೋಮನ್ ಕ್ಯಾಥೋಲಿಕ್, ಸಿರಿಯನ್ ಜಾಕೋಬೈಟ್, ಖಾಲ್ಡಿಯನ್ ಸಿರಿಯನ್ ಮತ್ತು ಪ್ರೊಟೆಸ್ಟೆಂಟ್ ಎಂಬ ನಾಲ್ಕು ಪಂಗಡಗಳಿವೆ. ಈ ಪಂಗಡಗಳಲ್ಲಿ ಪರಸ್ಪರ ವಿವಾಹ ಸಂಬಂಧವಿಲ್ಲ; ಒಂದೊಂದು ಪಂಗಡವೂ ಒಂದೊಂದು ವರ್ಣದಂತೆ ಪರಿಗಣನೆ. ವಿವಾಹದಲ್ಲಿ ಕ್ರೈಸ್ತ ಪದ್ಧತಿಗಳೇ ಪ್ರಮುಖವಾಗಿದ್ದರೂ ಹಿಂದುಗಳಂತೆ ಅವರಲ್ಲಿ ತಾಳಿ ಕಟ್ಟುವ ಸಂಪ್ರದಾಯವುಂಟು. ವರನ ಜತೆಯಲ್ಲಿ ಅವನ ಭಾವ ಇದ್ದುಕೊಂಡು ಅವನೇ ತಾಳಿಯನ್ನು ತರಬೇಕೆಂಬ ವಿಧಿಯಿದೆ. ವಿವಾಹ ಮುಹೂರ್ತದಲ್ಲಿ ಪುರೋಹಿತರು ಈ ತಾಳಿಯನ್ನು ಅವರ ಸಂಪ್ರದಾಯದಂತೆ ಹರಸಿ ಅದನ್ನು ವರನಿಗೆ ಕೊಡುತ್ತಾರೆ. ವರನು ವಧುವಿಗೆ ತಾಳಿಯನ್ನು ಕಟ್ಟಿ ಅವಳ ತಲೆಯ ಮೇಲೆ ಮುಸುಕನ್ನು ಬಿಡುತ್ತಾನೆ. ಆಕೆ ವೈವಾಹಿಕ ಜೀವನದಲ್ಲಿ ಇರುವ ವರೆಗೂ ತಾಳಿಯನ್ನು ಕೊರಳಿನಲ್ಲಿಟ್ಟುಕೊಂಡಿದ್ದು, ಗಂಡನು ಮೃತನಾದರೆ ತಾಳಿಯನ್ನು ಚರ್ಚಿಗೆ ಕೊಟ್ಟುಬಿಡುತ್ತಾಳೆ. ವಧುವಿನ ತಾಯಿಯು ವರನ ಹಣೆಯ ಮೇಲೆ ಉಂಗುರವೊಂದರಿಂದ ಶಿಲುಬೆಯ ಆಕಾರವನ್ನು ಬರೆದು ಅನಂತರ ವಧುವಿನ ಹಣೆಯ ಮೇಲೆ ಅದೇ ಆಕಾರವನ್ನು ಕಂಠಹಾರದ ಮಣಿಯೊಂದರಿಂದ ಬರೆಯುತ್ತಾಳೆ. ಎರಡೂ ಆಭರಣಗಳು ಅನಂತರ ವಧೂವರರಿಗೆ ಒದಿಸಲ್ಪಡುತ್ತವೆ.

ಕೊಚ್ಚಿಯಲ್ಲಿ ಮತ್ತು ತಿರುವಾಂಕೂರಿನಲ್ಲಿ 'ತಮುಕಲ್

(ಆಲಿಂಗನ) ಎಂಬ ವಿಧಿಯು ಕ್ರೈಸ್ತ ವಿವಾಹದ ಸಮಯದಲ್ಲಿ ನಡೆಯುವುದುಂಟು. ಮದುವೆಯ ಚಪ್ಪರದಲ್ಲಿ ವೇದಿಕೆಯೊಂದರ ಮೇಲೆ ವರನು ನಿಲ್ಲುತ್ತಾನೆ; ವಧುವಿನ ತಂದೆ ಮತ್ತಿತರ ಪುರುಷ ಬಾಂಧವರು ಒಬ್ಬೊಬ್ಬರಾಗಿ ಬಂದು ವರನನ್ನು ಅಪ್ಪಿಕೊಳ್ಳುತ್ತಾರೆ. ಹೆಂಗಸರು ಹೀಗೆಯೇ ವಧುವನ್ನು ಪುರಸ್ಕರಿಸುತ್ತಾರೆ. ಈ ವಿಧಿ ನಡೆಯುವಾಗ ಹೆಂಗಳೆಯರು ಹಾಡುಗಳನ್ನು ಹೇಳುತ್ತಿರುತ್ತಾರೆ. ಈ ತಪುಕಲ್ ವಿಧಿಯು ನಡೆದ ಮರುದಿನ ವರನು ವಧುವಿನ ತಾಯಿಗೆ, ಎಂದರೆ ತನ್ನ ಅತ್ತೆಗೆ, ಅತ್ತೆಯ ತಾಯಿಗೆ (ವಧುವಿನ ಅಜ್ಜಿಗೆ) ಮತ್ತು ವಧುವಿನ ಸೋದರಮಾವನಿಗೆ ಹೊಸ ವಸ್ತ್ರಗಳನ್ನು ಓದಿಸುವ ಪದ್ಧತಿಯಿದೆ.

ಸಾಮಾನ್ಯವಾಗಿ ಇಲ್ಲಿನ ರೋಮನ್ ಸಿರಿಯನ್ ಕ್ರೈಸ್ತರು ಸೋಮವಾರದಂದು ಮದುವೆಯನ್ನು ಆರಂಭಿಸಿ ಬುಧವಾರ ಮುಗಿಸುತ್ತಾರೆ. ಶುಕ್ರವಾರ, ಶನಿವಾರ, ಭಾನುವಾರಗಳಲ್ಲಿ ಈ ಶುಭಕಾರ್ಯವನ್ನು ಅವರು ಮಾಡುವುದಿಲ್ಲ. ಸಿರಿಯನ್ ಜಾಕೊಬೈಟ್ ಜನಕ್ಕೆ ವಿವಾಹವು ಭಾನುವಾರವೇ ನಡೆಯಬೇಕು; ಅವರು ತಾಳಿಯನ್ನು ಮಾಡಿಸುವುದು ಶುಕ್ರವಾರ. ಪ್ರೊಟೆಸ್ಟೆಂಟ್ ಜನಕ್ಕೆ ಉಳಿದ ಮೂರು ಪಂಗಡಗಳಿಗೆ ಇದ್ದಂತೆ ವಿವಾಹವು ಧಾರ್ಮಿಕ ಕ್ರಿಯೆ ಎಂಬ ಕಲ್ಪನೆಯಿಲ್ಲ; ಅವರ ಪಾಲಿಗೆ ಅದೊಂದು ಲೌಕಿಕ ವ್ಯವಹಾರವಷ್ಟೆ. ಇದರಲ್ಲಿ ಸಾಂಘಿಕ ಪ್ರಯೋಜನವೇ ವಿಶಿಷ್ಟವಾದುದು.

## 8. ಮುಸಲ್ಮಾನರ ಪದ್ಧತಿಗಳು

ಮೈಸೂರು ಸೀಮೆಯ ಮುಸಲ್ಮಾನರಲ್ಲಿ ಸಯ್ಯಿದ್, ಶೇಖ್, ಮುಘಲ್, ಪಠಾನ್ ಎಂಬ ನಾಲ್ಕು ಪ್ರಮುಖ ಜಾತಿಗಳು. ಜಾತಿ ಎನ್ನುವುದಕ್ಕಿಂತ ಪಂಗಡ ಎಂದರೆ ಒಪ್ಪೀತು. ಆದರೆ ವ್ಯವಹಾರದಲ್ಲಿ ಸಜಾತೀಯ ವಿವಾಹದ ಕಟ್ಟು ಕಾಣಿಸುತ್ತದೆ. ಶಿಯಾಗಳು, ಸುನ್ನಿಗಳು ಎಂಬ ಇನ್ನೊಂದು ವಿಭಾಗವೂ ಉಂಟು. ಇವರ ನಡುವೆ ಹಲವಾರು ತಾತ್ವಿಕ ಮೂಲಭೂತ ಭಿನ್ನಾಭಿಪ್ರಾಯ ಗಳಿವೆ. ಮೈಸೂರಿನ ಮುಸಲ್ಮಾನರು ಬಹುಮಟ್ಟಿಗೆ ಸುನ್ನಿಗಳು. ಇವರಲ್ಲದೆ ಅವನ್, ಗುಜರ್, ಜಾಟ್, ಲಬ್ಬೆ, ಮಾಪಿಳ್ಳೆ ಮುಂತಾದ ಪಂಗಡಗಳೂ ಈ ಕಡೆ ನೆಲೆಸಿವೆ. ಮೊದಲು ಹಿಂದುಗಳಾಗಿದ್ದು ಈಚೆಗೆ ಇಸ್ಲಾಂ ದೀಕ್ಷೆಯನ್ನು ತಳೆದವರು 'ನವಾಯತ್' (ಹೊಸದಾಗಿ ಬಂದವರು) ಎನಿಸಿಕೊಳ್ಳುತ್ತಾರೆ. ಇವರ ವೈವಾಹಿಕ ಪದ್ಧತಿಗಳಲ್ಲಿ ಹಿಂದೂ ಪ್ರಭಾವ ಮರೆಯಾಗಿಲ್ಲದಿರುವುದೊಂದು ವೈಶಿಷ್ಟ್ಯ.

**ನಿಶ್ಚಿತಾರ್ಥ**

ತೀರ ಸಮೀಪದ ರಕ್ತಬಂಧುಗಳನ್ನು ಮದುವೆಯಾಗಬಾರದೆಂಬ ನಿಷೇಧ ಅವರಲ್ಲಿ ಉಂಟು. ಉಳಿದ ಹೆಚ್ಚಿನ ಅಡ್ಡಿ-ಆತಂಕ ಗಳಿಲ್ಲ. ಮದುವೆ, ಕಾಣಿಕೆ ಸಲ್ಲಿಸಿ ನಡೆಯತಕ್ಕ ವಿಧಿ. ಗಂಡಸು ಕೊಡತಕ್ಕ ಈ ಕಾಣಿಕೆ (ಮಹರ್) ಅವರ ಧರ್ಮಶಾಸ್ತ್ರಗಳಲ್ಲಿಯೂ ನಿರ್ದಿಷ್ಟವಾಗಿದೆ. ಶಿಯಾಗಳಲ್ಲಿ ತಾತ್ಕಾಲಿಕ ವಿವಾಹ ಸಂಬಂಧ ಬಳಕೆಯಲ್ಲಿದೆ.

ಮುಸಲ್ಮಾನರಲ್ಲಿ ಸಂಬಂಧ ಬೆಳೆಸುವವರು ಕುಲ, ಶೀಲ

ಸಂಪ್ರದಾಯಗಳನ್ನು ಪರಿಶೀಲಿಸುತ್ತಾರೆ; ಜೋಯಿಸರನ್ನು ಪ್ರಶ್ನೆ ಕೇಳುತ್ತಾರೆ; ಶಕುನಗಳನ್ನು ಗಮನಿಸುತ್ತಾರೆ. ಇವನ್ನೆಲ್ಲ ಮುಗಿಸಿ ಹೆಣ್ಣನ್ನು ಬಯಸುವ ಗಂಡಿನ ಕಡೆಯ ಹೆಂಗಸರು ಹೆಣ್ಣಿನ ಮನೆಗೆ ಹೋಗಿ ಸಿಹಿತಿನಿಸು, ಸಕ್ಕರೆ ಅನ್ನ (ಮೀಠಾ ಪುಲಾವ್ ಶಕ್ಕರ್ ಭಾತ್) ತಿನ್ನಲು ಬಂದಿದ್ದೇವೆಂದು ಹೇಳುತ್ತಾರೆ. ಸಂಬಂಧ ಅವರಿಗೂ ಒಪ್ಪಿಗೆಯಾದರೆ ಮುಂದಿನ ಮಾತುಕತೆ ಬೆಳೆಯುತ್ತದೆ. ಆದರೆ ಈ ಮಾತುಕತೆ ಅಲ್ಲಿಯೇ ನಡೆಯುವುದಿಲ್ಲ. ಅದಕ್ಕಾಗಿಯೇ ಬೇರೊಂದು ದಿನವನ್ನು ಗೊತ್ತುಮಾಡಿಕೊಂಡು ನಡೆಸುತ್ತಾರೆ. ಈ ವಿಧಿಯಲ್ಲಿ 'ನಿಂತು ವೀಳೆಯದೆಲೆ ಕೊಡುವುದು' (ಖಡೇಪಾನ್), 'ಕೇಳುವುದು' (ಮಾಂಗ್ನಿ), 'ಸಕ್ಕರೆ ತರುವುದು' (ಸಕ್ಕರಾನಾ) ಎಂದು ಮೂರು ಅಂಗಗಳಿವೆ. ತಂತಮ್ಮ ಆರ್ಥಿಕ ನೆಲೆಯ ದೃಷ್ಟಿಯಿಂದ ಇವುಗಳಲ್ಲಿ ಒಂದನ್ನು ಮಾಡುತ್ತಾರೆ. 'ಕೇಳುವುದು' ತುಂಬ ಶ್ರೀಮಂತರ ವಿಧಿ; ಉಡುಗೊರೆಗಳೇ ಇಲ್ಲಿ ಮುಖ್ಯ. ಬಡವರೂ ಮಾಡಬಹುದಾದದ್ದು ನಿಂತು ವೀಳೆಯದೆಲೆ ಕೊಡುವುದು. ಈ ಮೂರೂ ನಮ್ಮ ನಿಶ್ಚಿತಾರ್ಥದಂತೆ. ಕಾಜಿಗಳ ಸಮ್ಮುಖದಲ್ಲಿ ನಡೆಯುವ ವಿಧಿ ಇದು. ಇದಕ್ಕೆ 'ನಿಸ್ಬತ್' ಎನ್ನುತ್ತಾರೆ.

### ಸಡಗರದ ಸಮಾರಂಭ

ನಿಶ್ಚಿತಾರ್ಥವಾದರೂ ಮದುವೆ ನಡೆಯಲೇಬೇಕೆಂಬ ನಿಯಮವಿಲ್ಲ. ಗಂಡಿನ ಕಡೆಯವರೂ ಹೆಣ್ಣಿನ ಕಡೆಯವರೂ ಪರಸ್ಪರ ಉಡುಗೊರೆಗಳನ್ನು ಕಳುಹಿಸಲಾರಂಭಿಸಿದ ದಿನದಿಂದ ವಿವಾಹ (ಬ್ಯಾಹ್) ಆರಂಭವಾಯಿತೆಂದು ಪರಿಗಣನೆ. ಇಂದೇ ಗಂಡು-ಹೆಣ್ಣುಗಳನ್ನು ವಧೂವರರೆಂದು (ದುಲ್ಹಾ ದುಲ್ಹನ್) ನಿರ್ದೇಶಿಸುವುದು. ಇದಾದ ಮರುದಿನ ಇಬ್ಬರನ್ನೂ ಬೇರೆಯಾಗಿ ಹಸೆಯ

ಮೇಲೆ ಕೂಡಿಸಿ ಮೇಂಧಿ–ಅರಿಸಿನ ಹಚ್ಚುತ್ತಾರೆ. ಇದು ತುಂಬ ಸಡಗರದ ಸಮಾರಂಭ. ವರನ ಮನೆಯಲ್ಲೂ ವಧುವಿನ ಮನೆಯಲ್ಲೂ ಚಪ್ಪರ (ಮಂಡ್ವಾ)ಗಳನ್ನು ಕಟ್ಟುತ್ತಾರೆ. ಇದರಲ್ಲಿ ಆರು ಅಥವಾ ಏಳು ಮೊಸರಿನ ಗಡಿಗೆಗಳನ್ನು ಇಟ್ಟು ಅವಕ್ಕೆ ಗಂಧಲೇಪನ ಮಾಡುವ ನಾಲ್ಕು ಮಂದಿ ಮುತ್ತೈದೆಯರಿಗೆ 'ಚಪ್ಪರದ ಹೆಂಗಸರು' ಎಂದೇ ಹೆಸರು. ಎರಡೂ ಕಡೆಗಳಲ್ಲಿ ನೆಂಟರಿಷ್ಟರಿಗೆ ಊಟ ನಡೆಯುತ್ತದೆ.

ಚಪ್ಪರದಲ್ಲಿ ನಡೆಯುವ 'ಚಕ್ಕೀ ನವಾರಿ ಸಮಾವರೀ' ಎಂಬ ವಿಧಿ ಸ್ವಾರಸ್ಯವಾದುದು. ಹಿಟ್ಟು ಮಾಡುವ ಕಲ್ಲು ಕೊಟ್ಟಣ (ಚಕ್ಕೀ)ಕ್ಕೆ ಗಂಧವನ್ನು ಬಳಿದು. ಅದಕ್ಕೆ ಕೆಂಪುದಾರವನ್ನು ಕಟ್ಟಿ. ಹಾಡುಗಳನ್ನು ಹೇಳಿಕೊಂಡು ವರನ ಮನೆಯಲ್ಲಿ ಏಳುಮಂದಿ, ವಧುವಿನ ಮನೆಯಲ್ಲಿ ಒಂಬತ್ತು ಮಂದಿ ಹೆಂಗಸರು ಸುಗಂಧ ಪುಡಿಯನ್ನು ಸಿದ್ಧಮಾಡುತ್ತಾರೆ. ವಿವಾಹದಲ್ಲೆಲ್ಲ ಬಳಸುವುದು ಇದೇ ಪುಡಿಯನ್ನು. ಪುಡಿ ಮಾಡಿದ ಹೆಂಗಸರು ತಂತಮ್ಮ ಲಂಗಗಳಲ್ಲಿ ಸ್ವಲ್ಪ ಪುಡಿಯನ್ನು ಕಟ್ಟಿಕೊಂಡು. ಸ್ವಲ್ಪ ಪುಡಿಯನ್ನು ಗಡಿಗೆಗಳಲ್ಲಿ ಹಾಕಿ. ಉಳಿದದ್ದನ್ನು ವಧೂವರರ ಮೈಗೆ ಬಳಿಯುತ್ತಾರೆ.

ಇದಾದನಂತರ ವರನ ಕಡೆಯಿಂದ ವಧುವಿನ ಮನೆಗೆ ತಿಂಡಿ–ತಿನಿಸು. ಉಡುಗೆ–ತೊಡಿಗೆ, ಆಭರಣಗಳ ಉಡುಗೊರೆಯನ್ನು ವರನ ಸ್ನೇಹಿತರು ಮೆರವಣಿಗೆಯಲ್ಲಿ ಕೊಂಡೊಯ್ದು ಅಲ್ಲಿ ವಧುವಿನ ಸಖಿಯರಿಗೆ ಒಪ್ಪಿಸುತ್ತಾರೆ. ಆ ಸಂಜೆ ವಧುವಿನ ಮನೆಯಿಂದ ವರನಿಗೆ 'ರಂಗ್‌ಬರೀ' ಎನಿಸಿಕೊಳ್ಳುವ ತಿಂಡಿ–ತಿನಿಸುಗಳು ಕಳುಹಿಸಲ್ಪಡುತ್ತವೆ. ರಾತ್ರಿ ಊಟವಾದ ಮೇಲೆ ವರನ ಕಡೆಯ ಹೆಂಗಸರು ವಧುವಿನ ಮನೆಗೆ ಹೋಗಿ 'ಶೀಲದ ಅಕ್ಕಿ

ಕುಟ್ಟುಣಿದ ಶಾಸ್ತ್ರ ನಡೆಸುತ್ತಾರೆ. ಸ್ವಲ್ಪ ಅಕ್ಕಿಯನ್ನು ಕೆಂಪು ಬಟ್ಟೆಯಲ್ಲಿ ಹಾಕಿ ಅದನ್ನು ಮರದ ಒನಕೆಯಲ್ಲಿ ಎಲ್ಲರೂ ಕುಟ್ಟು ವಂತೆ ನಟಿಸುತ್ತಾರೆ. ಇದರಲ್ಲಿ ವಧುವೂ ಭಾಗವಹಿಸುತ್ತಾಳೆ. ಇದಾದನಂತರ ವರನ ಮನೆಯಲ್ಲಿ 'ಎಣ್ಣೆಗಡಿಗೆ ಶಾಸ್ತ್ರ' ನಡೆದು ವರನ ಮೆರವಣಿಗೆ ಹೊರಡುತ್ತದೆ. ವರನು ಕುದುರೆಯ ಮೇಲೆ ಕುಳಿತು ಬರುವುದು ವಾಡಿಕೆ. ಮೆರವಣಿಗೆ ವಧುವಿನ ಮನೆ ಬಾಗಿಲಿಗೆ ಬಂದೊಡನೆ ವಧುವಿನ ಸೋದರನು ವರನಿಗೆ ಬಿಸಿಹಾಲು ಅಥವಾ ಷರಬತ್ತನ್ನು ಕುಡಿಯಲು ಕೊಡುತ್ತಾನೆ. ಅವನ ಇದಿರು ತೆಂಗಿನಕಾಯಿಯೊಂದನ್ನು ನೆಲಕ್ಕೆ ಎಸೆದು ಒಡೆಯುತ್ತಾರೆ. ನಿಂಬೆಹಣ್ಣುಗಳನ್ನು ನಿವಾಳಿಸಿ ನಾಲ್ಕೂ ದಿಕ್ಕುಗಳಿಗೆ ಎಸೆಯುತ್ತಾರೆ. ವರನ ಮುಖದ ಮೇಲೆ ಹೂವಿನ ತೆರೆ ಅಥವಾ ಮುಸುಕು ಇರುತ್ತದೆ.

## ನಿಕಾ ಶಾಸ್ತ್ರ

ವರನು ವಧುವಿನ ಮನೆಗೆ ಬಂದೊಡನೆ 'ನಿಕಾ' ವಿಧಿಯು ಆರಂಭವಾಗುತ್ತದೆ. ಪೌರೋಹಿತ್ಯ ಮಾಡಿಸುವ ಕಾಜಿಯು ಸಭೆಯಲ್ಲಿ ಇದ್ದ ವಯಸ್ಕರಲ್ಲಿ ಇಬ್ಬರನ್ನು ಸಾಕ್ಷಿಗಳಾಗಿ ನಿಯಮಿಸು ತ್ತಾರೆ. ಇವರು ವರನ ಕಡೆಯವರಾಗಿದ್ದು ವಧುವಿನ ನೆಂಟರ ಅಥವಾ ಸಖಿಯರ ಬಳಿ ಹೋಗಿ 'ನಿಕಾ' ಶಾಸ್ತ್ರವನ್ನು ನಡೆಸಲು ವ್ಯವಸ್ಥೆ ಮಾಡಬೇಕೆಂದು, ಮದುವೆಗೆ ನಿಶ್ಚಿತವಾದ ಹಣ (ಶುಲ್ಕ, ಮಹ್ರ್)ವನ್ನು ಹೇಳುವಂತೆಯೂ ಕೇಳಿಕೊಳ್ಳುತ್ತಾರೆ. ಇವರು ವಧುವಿನ ಕಡೆಯಿಂದ ಹಿಂದಿರುಗಿ ಬರುವಾಗ ಆ ಕಡೆಯವರೊಬ್ಬ ರನ್ನು ಕರೆತರುತ್ತಾರೆ. ಇವನು ಬಂದು ಹಣದ ವಿಚಾರವಾಗಿ ಮಾತುಕತೆ ನಡೆಸುತ್ತಾನೆ. ಇವನು ಶುಲ್ಕ ಇಷ್ಟೆಂದು ಹೇಳಿದ ಮೇಲೆ ಕಾಜಿಯು ವರನನ್ನು ಒಪ್ಪಿಗೆಗಾಗಿ ಕೇಳುತ್ತಾನೆ. ವರನು

ಒಪ್ಪಿದೊಡನೆ ಕಾಜಿಯು ಅವನ ಮುಖದ ಮೇಲಿದ್ದ ಮುಸುಕನ್ನು ತೆಗೆಯುತ್ತಾನೆ. ಅನಂತರ ವರನು ಕಾಬಾದ ಕಡೆ ತಿರುಗಿ ಕೊರಾನಿನ ಕೆಲವು ನಿರ್ದಿಷ್ಟ ಭಾಗಗಳನ್ನು ಪಠಿಸುತ್ತಾನೆ. ಮದುವೆಯ ವ್ಯವಹಾರದ ವಿಚಾರವಾಗಿ ಇರುವ ವಿಧಿಗಳನ್ನು ಕಾಜಿಯು ಅರಾಬಿಕ್ ಭಾಷೆಯಲ್ಲಿ ಪಠಿಸಿ ಅರ್ಥ ಹೇಳುವನು. ಇಷ್ಟಾದ ಮೇಲೆ ವಧುವಿನ ಕಡೆಯಿಂದ ಬಂದಿದ್ದ ಪ್ರತಿನಿಧಿಯೂ ವರನೂ ಕೈಕುಲುಕಿ ಶುಲ್ಕದ ಒಪ್ಪಿಗೆಯನ್ನು ದೃಢಪಡಿಸುತ್ತಾರೆ.

'ನಿಕಾ' ನಡೆಯುವಾಗ ಕಾಜಿಯ ಮುಂದೆ ತಟ್ಟೆಯೊಂದರಲ್ಲಿ ಮಿಠಾಯಿ, ಒಣದ್ರಾಕ್ಷಿ, ಖರ್ಜೂರ, ಬಾದಾಮಿ, ವೀಳೆಯದೆಲೆ, ಅಡಿಕೆ, ಅಕ್ಕಿ, ಚಂದನ, ಕರಿಮಣಿಯ ಎರಡೆಳೆ ಸರ ಇಷ್ಟು ಇರುತ್ತವೆ. ಕಾಜಿಗೆ ಸಲ್ಲಬೇಕಾದ ದಕ್ಷಿಣೆಯೂ ಅದರಲ್ಲಿಯೇ ಇರಬೇಕೆಂಬ ನಿಯಮವಿದೆ. ಕಾಜಿಯು ವಧೂವರರ ಪರವಾಗಿ ಕೊರಾನಿನ ಮಂತ್ರ ಒಂದನ್ನು ಪಠಿಸಿ ತಟ್ಟೆಯಲ್ಲಿದ್ದ ಮಿಠಾಯಿ ಮತ್ತು ಕರಿಮಣಿ ಸರವನ್ನು ವಧುವಿನ ಕಡೆಯ ಹೆಂಗಸೊಬ್ಬಳಿಗೆ (ಅಥವಾ ತಾಯಿಗೆ) ಕೊಟ್ಟು ಈ ಹೊತ್ತಿನಿಂದ ವಧುವು ಇಂಥ ವರನ ಹೆಂಡತಿಯೆಂದು ತಿಳಿದುಕೊಳ್ಳಬೇಕೆಂದು ಹೇಳುತ್ತಾನೆ. ವಧುವು ಕರಿಮಣಿಸರವನ್ನು ಹಾಕಿಕೊಂಡು ಮಿಠಾಯಿಯನ್ನು ತಿನ್ನಬೇಕು. ಸರವು ವಿವಾಹ ಸಂಬಂಧದ ಸಂಕೇತ; ಮಿಠಾಯಿಯು ಗಾರ್ಹಸ್ಥ್ಯ ಜೀವನದ ಸುಖಸಂತೋಷಗಳ ಸಂಕೇತ. ಆದರೆ ಇದು ನಡೆಯುವಾಗ ವಧು ಅಳಬೇಕೆಂಬ ವಾಡಿಕೆಯಿದೆ. ಕರಿಮಣಿ ಸರವನ್ನು ಆಕೆಯ ಸಖಿಯರು ಕಟ್ಟುತ್ತಾರೆ. ಎಂದರೆ 'ನಿಕಾ' ಮುಗಿಯಿತು.

## ಹಜೂಲುಹಾ

ಇತ್ತಕಡೆ ವರನು ತನ್ನ ನೆಂಟರಿಷ್ಟರನ್ನೆಲ್ಲ ಆಲಂಗಿಸಿಕೊಂಡು

ಕೈಗಳಿಗೆ ಮುತ್ತಿಡುತ್ತಾನೆ. ಅವನು ಗಂಡಸರ ಕೋಣೆಯಿಂದ ವಧುವಿನ ವಸತಿಗೆ ಅದೇ ದಿನ ಹೊರಡುವ ಮುನ್ನ. ವಧು ಹಾಕಿಕೊಳ್ಳಬೇಕಾದ 'ಸಿಹರಾ' ಎಂಬ ಮುಸುಕನ್ನು ಮೆರವಣಿಗೆ ಯಲ್ಲಿ ವರನು ಅವಳ ಬಳಿ ಕಳುಹಿಸುತ್ತಾನೆ. ಇದನ್ನು ಒಯ್ಯು ವವರು ಹೆಂಗಸರು; ಇವರಿಗೆಲ್ಲ ಅಲ್ಲಿ. ವಧುವಿನ ಕಡೆ, ಊಟ ಉಪಚಾರ ನಡೆಯುತ್ತದೆ. ಅಲ್ಲಿ ವಧುವನ್ನು ಸಿಂಗರಿಸಿ ಮಂಟಪದ ಮೇಲೆ ಕೂರಿಸುತ್ತಾರೆ. ಅವಳ ಮುಂದೆ ಕೆಂಪು ಪರದೆಯ ಆಚೆ ವರನಿಗೆ ಸ್ಥಾನ. ವಧುವು ಒಂದು ಕೆಂಪು ದಾರವನ್ನೂ, ಅಕ್ಕಿಯ ಕಾಳುಗಳನ್ನೂ ಪರದೆಯಾಚೆ ವರನ ಮೇಲೆ ಎಸೆಯುತ್ತಾಳೆ. ಈ ಕಡೆ ವರನ ಸೋದರಿಯು ನಿಂತಿದ್ದು ಆ ಕೆಂಪುದಾರದ ಕೊನೆಗೆ ಉಂಗುರವೊಂದನ್ನು ಕಟ್ಟಿ ಅದನ್ನು ವರನ ಕೈಗಿತ್ತು ಅಕ್ಕಿಯ ಕಾಳುಗಳೊಂದಿಗೆ ವಧುವಿನ ಮೇಲೆ ಎಸೆಯುವಂತೆ ಮಾಡುತ್ತಾಳೆ. ಮತ್ತೆ ಆ ಉಂಗುರವನ್ನು ವಧುವು ವರನ ಮೇಲೆ ಎಸೆಯುತ್ತಾಳೆ. ಇದು ಮೂರು ಬಾರಿ ನಡೆಯುತ್ತದೆ. ನಡೆಯುವಾಗಲೆಲ್ಲ ಹೆಂಗಳೆಯರು ಹಾಡುತ್ತಿರುತ್ತಾರೆ. ಈ ಹಾಡಿಗೆ 'ಹಜೂಲುಹಾ' ಎಂದು ಹೆಸರು. ಇದು ಮುಗಿದ ಮೇಲೆ ವರನು ಅಡ್ಡವಾಗಿರುವ ಪರದೆಯನ್ನು ಬಿಚ್ಚಿ ವಧುವನ್ನು ಪಕ್ಕದಲ್ಲಿ ಕುಳ್ಳಿರಿಸಿಕೊಳ್ಳುತ್ತಾನೆ. ವಧುವಿನ ಕೋಣೆಗೆ ವರನನ್ನು ಕೊಂಡೊಯ್ಯುವವನು ವಧುವಿನ ಸೋದರ. ತೀರ ಹತ್ತಿರದ ನೆಂಟರನ್ನು ಬಿಟ್ಟು ಉಳಿದ ಹೆಂಗಸರೆಲ್ಲ ಮುಸುಕು ಹಾಕಿಕೊಂಡಿರುತ್ತಾರೆ.

ವಧುವನ್ನು ವರನು ಕರೆದೊಯ್ಯುವಾಗ ಕುದುರೆಯ ಮೇಲೆ ಕುಳಿತು ಹೋಗುತ್ತಾನೆ; ವಧುವು ಪೆಟ್ಟಿಗೆಗಾಡಿ (ಮಿಯಾನ) ಯಲ್ಲಿ ಬರುತ್ತಾಳೆ. ಬಾಗಿಲಲ್ಲಿ ವರನ ಸೋದರಿಯು ನಿಂತಿದ್ದು ಅವರಲ್ಲಿ ಹುಟ್ಟುವ ಮೊದಲನೇ ಮಗಳನ್ನು ತನ್ನ ಮಗನಿಗೆ

ಕೊಡಲೊಪ್ಪಬೇಕೆಂದು ಕೇಳುವ ವಾಡಿಕೆ ಇದೆ. ಗಾಡಿಯಿಂದ ಮದುಗಿಯನ್ನು ಎತ್ತಿಕೊಂಡೇ ಇಳಿಸಿ ವರನು ಅವಳನ್ನು ಹಾಗೆಯೇ ಒಳಗೆ ಒಯ್ಯುತ್ತಾನೆ. ಆಕೆ ಹೊಸ್ತಿಲನ್ನು ಮುಟ್ಟಬಾರದೆಂಬ ನಿರ್ಬಂಧ ಇದಕ್ಕೆ ಕಾರಣ. ವಧುವು ವರನ ಕಾಲಿಗೂ, ವರನು ವಧುವಿನ ಕಾಲಿಗೂ ಗಂಧ ಹಚ್ಚಿ ನೀರಿನಿಂದ ತೊಳೆದು ಶಯ್ಯಾಗೃಹವನ್ನು ಸೇರುತ್ತಾರೆ.

**ಸಮಾರಾಧನೆ**

ಮರುದಿನ, ಎಂದರೆ ಮೂರನೆಯ ದಿನ, ಮದುವೆಯಲ್ಲಿ ಕಟ್ಟಿದ್ದ ಕಂಕಣವನ್ನು ಬಿಚ್ಚುವ ಶಾಸ್ತ್ರ ನಡೆಯುತ್ತದೆ. ಕೆಲವು ಮುತ್ತುಗಳು, ನಾಣ್ಯ, ಹೂವು, ಅಕ್ಕಿಯ ಕಾಳುಗಳು ಇವನ್ನು ಕೆಂಪು ಬಟ್ಟೆಯಲ್ಲಿ ಸುತ್ತಿ ಕೆಂಪು ದಾರದಿಂದ ವಧುವಿನ ಮತ್ತು ವರನ ಬಲಗೈಗಳಿಗೆ ಕಟ್ಟಿರುವುದೇ ಈ ಕಂಕಣ (ಕಂಗನ್). ಕಂಕಣ ವಿಸರ್ಜನೆ (ಕಂಗನ್ ಖೋಲ್ನಾ)ಯಾದ ಮೂರು ನಾಲ್ಕು ದಿನಗಳವರೆಗೆ ವಧೂವರರಿಂದ ಯಾವ ಕೆಲಸವನ್ನೂ ಮಾಡಿಸುವುದಿಲ್ಲ. ಈ ಅವಧಿ ಮುಗಿದಂದು ವಧೂವರರಿಬ್ಬರೂ ಸೇರಿ ಕೆಲವಾರು ಪೂರಿಗಳನ್ನು ಮಾಡಬೇಕು. ಸಣ್ಣ ಸಣ್ಣ ಕೆಲಸಗಳನ್ನು ಮಾಡಬೇಕು. ಇದಕ್ಕೆ 'ಕೈಗಳನ್ನು ಮತ್ತೆ ಉಪಯೋಗಿಸುವ' (ಹಾಥ್ ಬರ್ತಾನ) ಶಾಸ್ತ್ರವೆನ್ನುತ್ತಾರೆ. ಆ ದಿನ ದೊಡ್ಡ ಸಮಾರಾಧನೆ ನಡೆಯುತ್ತದೆ.

ಅಲ್ಲಿಂದ ಮುಂದೆ ಐದು ಶುಕ್ರವಾರ (ಜುಮಾಯ್)ಗಳು ನೆಂಟರಿಷ್ಟರಿಗೆಲ್ಲ ಚೊಕ್ಕ ಭೋಜನ ನಡೆಯಬೇಕು. ಮೊದಲನೆಯದು ವಧುವಿನ ಮನೆಯಲ್ಲಿ, ಕಡೆಯದು ವರನ ಮನೆಯಲ್ಲಿ; ಉಳಿದ ಮೂರು ಯಾರಾದರೂ ಹತ್ತಿರದ ನೆಂಟರ ಮನೆಗಳಲ್ಲಿ ನಡೆಯುತ್ತವೆ. ವಧುವು ತನ್ನ ತಂದೆ ತಾಯಿಯರ ಮನೆಗೆ

ಹೋದಾಗ ಗಂಡಸರ ಎದುರು ಮುಸುಕನ್ನು ಎಳೆದುಕೊಳ್ಳುತ್ತಾಳೆ. ಈ ಮುಸುಕಿಗೆ 'ಘೂಂಘಟ್' ಎಂದು ಹೆಸರು.

**ಮರು ಮಕ್ಕತಾಯಂ**

ದಕ್ಷಿಣ ಸಮುದ್ರ ತೀರದಲ್ಲಿರುವ ಮಾಪಿಳ್ಳರೂ ಮುಸಲ್ಮಾನರು; ಅವರಲ್ಲಿ ಶಿಯಾ–ಸುನ್ನಿ ಪ್ರಭೇದವುಂಟು. ಅವರಲ್ಲಿ 'ನಿಕಾ' ಎಂಬುದೇ ಪ್ರಧಾನ ವಿಧಿ. ಇದು ವಧುವಿನ ಮನೆಯಲ್ಲಿಯೋ, ಕಾಜಿಯ ಮನೆಯಲ್ಲಿಯೋ ನಡೆಯುತ್ತದೆ. ವಧುವಿನ ತಂದೆ ಹೆಚ್ಚಿನ ವರದಕ್ಷಿಣೆಯನ್ನು ಕೊಡಬೇಕಾಗುತ್ತದೆ. ಶ್ರೀಮಂತನಲ್ಲದವನಿಗೆ ಹತ್ತಾರು ಹೆಣ್ಣು ಮಕ್ಕಳಿದ್ದರೆ ಅವನ ಅವಸ್ಥೆ ಹೇಳತೀರದು. ಅದೂ, ಹುಡುಗಿ ಹತ್ತು ಹನ್ನೆರಡು ವರ್ಷದವಳಿರುವಾಗಲೇ ಮದುವೆ ಮಾಡುವುದು ಅವರ ಪದ್ಧತಿ. ಬೆಳೆದ ಹುಡುಗಿಯರಿಗೆ ವರ ಸಿಗುವುದು ಕಷ್ಟ. ಮಲೆಯಾಳದ ಮಾಪಿಳ್ಳರಲ್ಲಿ ಕೋಯ, ಮಾಲುಮಿ, ಉರುಕ್ಕಾರನ್ ಮುಂತಾದ ಪಂಗಡಗಳಿವೆ. ಇವರಲ್ಲಿ ಕೋಯ ಮಾಪಿಳ್ಳರು ಹುಡುಗಿ ಆರೇಳು ವರ್ಷದವಳಿರುವಾಗಲೇ ಮದುವೆ ಮಾಡಿಬಿಡುತ್ತಾರೆ. ಅವರಲ್ಲಿ ಸ್ತ್ರೀಧನ ಅಥವಾ ವರದಕ್ಷಿಣೆಯ ಸಂಪ್ರದಾಯವಿಲ್ಲ. ಕೆಲವು ಪಂಗಡಗಳು ಉಳಿದ ಮಲೆಯಾಳಿಗಳಂತೆ 'ಮರು ಮಕ್ಕತ್ತಾಯಂ' ಪದ್ಧತಿಯನ್ನು ಅನುಸರಿಸುತ್ತಾರೆ; ಕೆಲವು ಪಂಗಡಗಳು ಮುಸಲ್ಮಾನ ಧರ್ಮಶಾಸ್ತ್ರವನ್ನು ಅನುಸರಿಸುತ್ತಾರೆ.

ಲಬ್ಬೆ ಜನ ತಮಿಳು ಮುಸಲ್ಮಾನರು; ಮೈಸೂರು ಸೀಮೆಯಲ್ಲಿ ತುಂಬ ಹಿಂದಿನಿಂದ ನೆಲೆಸಿದ್ದಾರೆ. ಇವರು ಪ್ರಮುಖವಾಗಿ ವ್ಯಾಪಾರಿಗಳು. ಇವರ ಪೂರ್ವಿಕರು ಅರಬ್ಬಿ ಜನರೆಂದು ಹೇಳುತ್ತಾರೆ. ಇವರ ಮದುವೆಯಲ್ಲಿ ಹಿಂದೂ ಪದ್ಧತಿಗಳು ಹಲವಾರು ಬೆರೆತಿವೆ; ಆದರೆ ಕೊರಾನಿನ ಮಂತ್ರಗಳನ್ನು ಪಠಿಸುತ್ತಾರೆ.

ಈ ಸಂದರ್ಭಗಳಲ್ಲಿ ಹೆಂಗಸರು ಬುರುಕಿಗಳನ್ನು ಹಾಕಿಕೊಂಡಿರುತ್ತಾರೆ.

ಅಂತೂ ವಿವಾಹವೆಂದರೆ ಮುಸಲ್ಮಾನರಲ್ಲಿ ಒಂದು ಒಪ್ಪಂದದ ವ್ಯವಹಾರ. ಶುಲ್ಕದ ಮಾತಿಲ್ಲದೆ, ಸಾಕ್ಷಿಗಳಿಲ್ಲದೆ ವಿವಾಹ ನಡೆಯುವುದಿಲ್ಲ. ಶಿಯಾಗಳಿಗೆ ಸಾಕ್ಷಿಗಳ ಅಗತ್ಯವಿಲ್ಲವೆಂದು ಹೇಳುತ್ತಾರೆ. ಅವರ ಧರ್ಮಶಾಸ್ತ್ರಗಳ ಪ್ರಕಾರ ಒಬ್ಬನು ನಾಲ್ವರು ಹೆಂಡಂದಿರನ್ನು ಹೊಂದಿರಬಹುದು; ಆದರೆ ವ್ಯವಹಾರದಲ್ಲಿ ಹೆಚ್ಚೆಂದರೆ ಇಬ್ಬರಿರುತ್ತಾರಷ್ಟೆ. ಹೆಂಡತಿಗೆ ಗಂಡನು ಕೊಡಲೊಪ್ಪುವ ಶುಲ್ಕ ಎರಡು ಬಗೆಯುವು; ಒಂದು ವಿವಾಹ ಸಂದರ್ಭದಲ್ಲಿಯೇ ಸಂದಾಯವಾಗತಕ್ಕದು; ಇನ್ನೊಂದು ಮುಂದೆ ವಿವಾಹ ವಿಚ್ಛೇದವಾದರೆ ಕೊಡಬೇಕಾಗುವ ಹಣ. ಈ ಹಣ ಕೊಡಬೇಕಾಗುವುದೆಂಬ ಹೆದರಿಕೆಯಿಂದ ಗಂಡನು ವಿವಾಹ ವಿಚ್ಛೇದಕ್ಕೆ ಅವಕಾಶ ಕೊಡದೆ ಸರಿಯಾಗಿ ನಡೆದುಕೊಳ್ಳಬಹುದೆಂದು ನಿರೀಕ್ಷೆ. ಇಸ್ಲಾಂ ಧರ್ಮಶಾಸ್ತ್ರಗಳ ಪ್ರಕಾರ ಗಂಡನು ಇಷ್ಟಬಂದರೆ ಹೆಂಡತಿಯನ್ನು ಬಿಟ್ಟು ಬಿಡಬಹುದು. 'ತಲಕ್' (ವಿಚ್ಛೇದ) ಎಂದು ಮೂರು ಬಾರಿ ಹೇಳಿ ಹೆಂಡತಿಯನ್ನು ಹೊರಗೆ ಕಳುಹಿಸಿದರೆ ವಿವಾಹ ವಿಚ್ಛೇದವಾದಂತೆಯೇ. ಇದಕ್ಕೆ ನ್ಯಾಯಾಂಗವೂ ಸಮ್ಮತಿಸುತ್ತದೆ. ಹೆಂಡತಿಯೇ ಗಂಡನನ್ನು ಬಿಡಬೇಕಾದರೆ ನ್ಯಾಯಾಲಯದ ಮುಂದೆ ಬರಬೇಕು: ಗಂಡನ ದೋಷವನ್ನು ದೃಢಪಡಿಸಬೇಕು. ಮುಸಲ್ಮಾನರ ಧರ್ಮ ಪುರುಷಪ್ರಧಾನವಾದುದು, ಪುರುಷ ಪಕ್ಷಪಾತಿಯಾದುದು.

ಆದರೆ 1939ರ ಮುಸ್ಲಿಂ ವಿವಾಹ ವಿಚ್ಛೇದ ಮಸೂದೆಯು ಹೆಂಡತಿಗೆ ತನ್ನ ಗಂಡನು ಇನ್ನೊಬ್ಬಳನ್ನು ಮದುವೆಯಾದನೆಂಬ ಕಾರಣದಿಂದಲೇ ವಿವಾಹ ವಿಚ್ಛೇದ ಹೊಂದುವ ಅವಕಾಶ

ಕೊಟ್ಟಿದೆ. ಪಾಕಿಸ್ತಾನದಲ್ಲಿ ಕೂಡ ಬಹುಪತ್ನೀತ್ವ ಪದ್ಧತಿಯನ್ನು ನಿಷೇಧಿಸಿದ್ದಾರೆ. ಈ ಮಸೂದೆಯ ಪ್ರಕಾರ ಮದುವೆಯಾಗುವ ಹುಡುಗ ಹದಿನೆಂಟು ವರ್ಷಗಳ ಮೇಲಿರಬೇಕು, ಹುಡುಗಿ ಹದಿನೈದು ವರ್ಷಗಳ ಮೇಲಿರಬೇಕು.

## 9. ಕ್ರೈಸ್ತ ಜನರ ವಿವಾಹ ಪದ್ಧತಿಗಳು

ಕನ್ನಡ ನಾಡಿನಲ್ಲಿ ಕ್ರೈಸ್ತಧರ್ಮದ ಪ್ರಚಾರಕ್ಕೆ ಮೊದಲು ಕೈಹಾಕಿದವರು ಸತ್ಯಮಂಗಲದ ಕಡೆಯಿಂದ ಬಂದ ಪೋರ್ಚುಗೀಸ್ ಜೆಸ್ಯೂಟ್ ಪಾದ್ರಿಗಳು. 1325ರ ಸುಮಾರಿಗೆ ಇಲ್ಲಿನ ಜನರಲ್ಲಿ ಕ್ರೈಸ್ತ ಧರ್ಮದ ಪ್ರಭಾವವನ್ನು ಮೂಡಿಸಲು ಆರಂಭಿಸಿದ್ದರು. ಈ ಕಡೆ ರೋಮನ್ ಕ್ಯಾಥೋಲಿಕ್ ಪಂಗಡವೇ ಮೊದಲು ಬೆಳೆದದ್ದು, ಬಹುಸಂಖ್ಯಾಕವಾದದ್ದೂ ಇದೇ. ಇಲ್ಲಿನ ಹಿಂದೂ ಜನ ಮತಾಂತರಗೊಂಡಾಗ ಅವರ ಪದ್ಧತಿಗಳಲ್ಲಿ, ವ್ಯವಹಾರದಲ್ಲಿ ಆಚಾರದಲ್ಲಿ, ನಂಬಿಕೆಗಳಲ್ಲಿ ಅಷ್ಟಾಗಿ ಮಾರ್ಪಾಡು ಒದಗಬೇಕಾಗಿರಲಿಲ್ಲ. ಇವನ್ನೆಲ್ಲ ಅಳವಡಿಸಿಕೊಂಡು ರೋಮನ್ ಕ್ಯಾಥೋಲಿಕ್ ಪಂಥ ವಿಸ್ತೃತವಾಯಿತು. ಭಾರತೀಯ ಕ್ರೈಸ್ತರಲ್ಲಿ ಜಾತಿ ವ್ಯವಸ್ಥೆಯೂ, ತಾರತಮ್ಯವೂ ಇಲ್ಲದೆ ಇಲ್ಲ. 'ಕ್ರೈಸ್ತನ ಮೈ ಕೆರೆದರೆ ಅವನು ಹಿಂದುವೇ ಎಂಬುವನ್ನು ಕಾಣಬಹುದು' ಎಂಬ ಲೋಕೋಕ್ತಿಯಿದೆ.

ಇವರಲ್ಲಿ ಮದುವೆಯು ಸಪ್ತಸಂಸ್ಕಾರಗಳಲ್ಲಿ ಒಂದು. ಜ್ಞಾನ ಸ್ನಾನ ದೀಕ್ಷೆ ಪಡೆದ ವಧೂವರರ ನಡುವೆ ನಡೆದ ಮದುವೆಯೇ ವಿಧ್ಯುಕ್ತವಾದುದು. ಕ್ರೈಸ್ತ ಧರ್ಮದಲ್ಲಿ ಏಕಪತ್ನೀ – ಏಕಪತಿ ವಿವಾಹವೇ ಸಾಧುವಾದುದು, ಇದನ್ನು 'ಯೂನಿಟಿ' ಎನ್ನುತ್ತಾರೆ. ವಿವಾಹವು ಸಂಸ್ಕಾರವಾದುದರಿಂದ ಸ್ವೇಚ್ಛೆಯಿಂದ ವಿಚ್ಛೇದಕ್ಕೆ ಅವಕಾಶವಿಲ್ಲ ( indissolubility ). ವಧೂವರರಲ್ಲಿ ಒಬ್ಬರು ಜ್ಞಾನ ಸ್ನಾನ ದೀಕ್ಷೆಯನ್ನು ಪಡೆಯದವರಾದರೆ, ಅಥವಾ ಅವರಲ್ಲಿ ಒಬ್ಬರು ಯತ್ಯಾಶ್ರಮವನ್ನು ಗ್ರಹಿಸಿ ಮತವನ್ನು

ಸೇರಿದರೆ, ಅಥವಾ ಪೋಪ್ ಜಗದ್ಗುರುವು ಯಾವುದಾದರೂ ಗಂಭೀರವಾದ ಕಾರಣಕ್ಕಾಗಿ ಇಷ್ಟಪಟ್ಟರೆ ವಿವಾಹ ಬಂಧವು ಕಳಚಿ ಬೀಳಬಹುದೆಂಬ ನಿಯಮವಿದೆ.

**ಲೌಕಿಕ ಪ್ರಯೋಜನ**

ಮನುಷ್ಯನಿಗೆ ವಿವಾಹವು ಅತ್ಯಗತ್ಯವಾದ ಸಂಸ್ಕಾರವೆಂಬ ಕಲ್ಪನೆ ರೋಮಕ ಕ್ರೈಸ್ತರಲ್ಲಿಲ್ಲ. ಮದುವೆಯಾದವನು ನಿತ್ಯಯಾತ್ರೆಯ ಗೊಂದಲದಲ್ಲಿ ಸಿಕ್ಕಿ ಕ್ಲಿಷ್ಟನಾಗುತ್ತಾನೆ, ಅರ್ಧವಾಗುತ್ತಾನೆ. ದೇವರ ಸಾಮ್ರಾಜ್ಯದೆಡೆ ಅವನ ಚೇತನ ತಿರುಗುವುದು ಕಷ್ಟ. ಈ ಕಾರಣದಿಂದ ಬ್ರಹ್ಮಚರ್ಯನಿಷ್ಠೆ (celibacy) ಅವರಲ್ಲಿ ಮಹತ್ವದ ಮಾತು. ಪ್ರಾಪಂಚಿಕ ಪ್ರಯೋಜನಗಳಿಗಾಗಿ ಮದುವೆ ಯಾಗುವುದು ಅಸಹಜವೆಂದೇನು ಅವರು ಎಣಿಸುವುದಿಲ್ಲ. ಗಂಡು–ಹೆಣ್ಣುಗಳು ದೇವರ ಸೃಷ್ಟಿಯೇ ಅಲ್ಲವೇ? ಅಷ್ಟಲ್ಲದೆ ತನಗೂ ಮಠ (church)ಕ್ಕೂ ಇರುವ ಅವಿಭಾಜ್ಯ ಸಂಬಂಧ ವನ್ನು ನಿರ್ದೇಶಿಸಲು ಯೇಸುಕ್ರಿಸ್ತನು ಮದುವೆಯನ್ನು ಸಂಸ್ಕಾರದ ನೆಲೆಗೆ ಏರಿಸಿದನು. ಎಷ್ಟಾದರೂ ಮದುವೆಗೆ ಪ್ರಜನನವೆಂಬ ಲೌಕಿಕ ಪ್ರಯೋಜನವಿದೆಯೇ ವಿನಾ ಆಧ್ಯಾತ್ಮಿಕವಾದ ಅರ್ಥ ವಿದೆಯೆಂದು ಬಹುಮಟ್ಟಿಗೆ ಅವರು ನಂಬುವುದಿಲ್ಲ.

**ಮಠದ ನಿಕಟ ಸಂಬಂಧ**

ಕ್ರೈಸ್ತರಲ್ಲಿ ಮದುವೆಗೂ ಮಠಕ್ಕೂ ತೀರ ನಿಕಟವಾದ ಸಂಬಂಧ ವುಂಟು. ವಧೂವರರ ವಿವಾಹಾನುಕೂಲ್ಯಗಳನ್ನು ಪರಾಮರ್ಶಿಸಿ ಧರ್ಮಸಮ್ಮತವಾದ ವಿವಾಹಗಳಲ್ಲಿ ಪೌರೋಹಿತ್ಯ ವಹಿಸಿ ನಡೆಸಿಕೊಡುವುದೂ ಮಠದ ಪಾದ್ರಿಗಳ ಕೆಲಸ. ವಿವಾಹವೂ ಮಠ ದಲ್ಲಿಯೇ ಪಾದ್ರಿಯ ಸಮ್ಮುಖದಲ್ಲಿಯೇ ನಡೆಯಬೇಕೆಂಬ ನಿಯಮ ವಿದೆ. ಮಠದಲ್ಲಿ ಪಾದ್ರಿಯ ಮತ್ತು ಅವನು ನೇಮಿಸಿದ ಸಾಕ್ಷಿಗಳ

ಸಮ್ಮುಖದಲ್ಲಿ ನಡೆಯದ ವಿವಾಹವು ಕಾನೂನಿನಲ್ಲೂ ನಿಲ್ಲದು. ವಿವಾಹವು ಏಕವಾಗಿ, ಅವಿಚ್ಛಿನ್ನವಾಗಿ ಉಳಿಯುವಂತೆ ನೋಡಿಕೊಳ್ಳುವ ಹೊಣೆಯೂ ಮಠದ್ದೇ ಎಂಬ ಕಲ್ಪನೆಯಿದ್ದಿತು.

ಭಾರತೀಯ ಕ್ರೈಸ್ತರು ಮತಾಂತರ ಹೊಂದುವ ಮುನ್ನ ತಮ್ಮತಮ್ಮ ಜಾತಿಗಳಲ್ಲಿ ನಡೆಸುತ್ತಿದ್ದ ಪದ್ಧತಿಗಳನ್ನು ಅನಂತರವೂ ಉಳಿಸಿಕೊಳ್ಳುವ ಸೌಲಭ್ಯವಿದೆ. ಕ್ರಿಸ್ತಾಬ್ದ ಹದಿನೇಳು-ಹದಿನೆಂಟನೆಯ ಶತಮಾನದಲ್ಲಿ ದಕ್ಷಿಣಭಾರತದ ಕಡೆ ಧರ್ಮಪ್ರಚಾರ ನಡೆಸುತ್ತಿದ್ದ ಕ್ರೈಸ್ತ ಪಾದ್ರಿಗಳ ಮುಂದೆ ಈ ಸಮಸ್ಯೆ ಎದ್ದಿದ್ದಿತು. ಯಾವ ಯಾವ ಪದ್ಧತಿಗಳನ್ನು ಉಳಿಸಿಕೊಳ್ಳಬಹುದು ಎಂಬುದರ ಬಗ್ಗೆ 1923ರಲ್ಲಿಯೇ ಪೋಪ್ ಹದಿನೈದನೆಯ ಗ್ರಿಗೊರಿ, 1704 ರಲ್ಲಿ ಕಾರ್ಡಿನಲ್ ಡಿ ತೂರ್ನನ್ ಇವರು ತಮ್ಮ ನಿರೂಪಗಳಲ್ಲಿ ಸ್ಪಷ್ಟಪಡಿಸಿದರು. ಕಂದಾಚಾರದ ಕುರುಡು ನಂಬಿಕೆಗಳನ್ನೂ, ಸಾಧ್ಯವಿದ್ದಷ್ಟೂ ಅಳಿಸಲು ಪಾದ್ರಿಗಳಿಗೆ ಅಪ್ಪಣೆಯಿದ್ದಿತಾದರೂ ಮತ ವಿಸ್ತಾರವಾಗುವ ದೃಷ್ಟಿಯಿಂದ ಆಯಾ ಜನರಿಗೆ ಅಂಟಿ ಬಂದಿದ್ದ ಹಲವಾರು ಪದ್ಧತಿಗಳನ್ನು ಉಳಿಸಲು ಈ ನಿರೂಪಗಳು ನೆರವಾದವು. ಧೂರಿ-ಭೋಜನ, ತಾಳಿಬಂಧನ, ಚಪ್ಪರಪೂಜೆ, ಮುಂತಾದುವೆಲ್ಲ ನಡೆಯುತ್ತವೆ. ಆದರೆ ವಿಧಿಗಳು, ಶಾಸ್ತ್ರಕರ್ಮಗಳು, ಏನೂ ನಡೆಯಬಾರದೆಂಬ ನಿಯಮವುಂಟು. ಮದುವೆಗೆ ಮುನ್ನ ಜಾತಕ ನೋಡಿಸುವುದು, ಶಕುನ ಕೇಳುವುದು, ನಿರ್ಣಯ ಹಾಕಿಸುವುದು, ಅಥವಾ ಮದುವೆಗೆ ಮುಹೂರ್ತ ಇಡಿಸಲು ಜ್ಯೋತಿಷ್ಕರನ್ನು ಕಾಣುವುದು ಇವೆಲ್ಲ ನಿಷಿದ್ಧವಾದುವು. ಅವರ ಮದುವೆ ವರ್ಷದ ಯಾವ ದಿನದಲ್ಲಿ ಬೇಕಾದರೂ ನಡೆಯಬಹುದು.

ವಧೂವರರ ತಾಯಿತಂದೆಯರು ಅಥವಾ ಬಳಗದ ಹಿರಿಯರು

ಕಳೆತು ವಿವಾಹ ಸಂಬಂಧವನ್ನು ನಿಶ್ಚಯಿಸುತ್ತಾರೆ. ಎರಡೂ ಕಡೆಯುವರ ನಡುವೆ ಮಾತುಕತೆ ನಡೆಯುವಾಗ ಮಧ್ಯಸ್ಥನೊಬ್ಬನನ್ನು ಇರಿಸಿಕೊಳ್ಳುವ ವಾಡಿಕೆ ಇದೆ. ವಧೂವರರ ತಂದೆಯುವರು ವಿವಾಹಕ್ಕೆ ತಂತಮ್ಮ ಒಪ್ಪಿಗೆಯುನ್ನು ಸೂಚಿಸಿ ಬರೆದಿಡಬೇಕೆಂಬ ನಿಯುಮವಿದೆ. ಇದಾದನಂತರ ನಿಶ್ಚಿತಾರ್ಥ (betrothal) ದ ವಿಧಿ ನಡೆಯುತ್ತದೆ. ಇಲ್ಲಿಯೂ ವಧೂವರರು ತಮ್ಮ ಅನುಮೋದನೆಯುನ್ನೂ ಈ ಸಂಬಂಧಕ್ಕೆ ತಾವು ಬದ್ಧರೆಂಬ ವಾಗ್ದಾನವನ್ನೂ ಲಿಖಿತಮೂಲಕವಾಗಿ ಸ್ಪಷ್ಟಪಡಿಸುತ್ತಾರೆ. ಈ ಪತ್ರಕ್ಕೆ ಅವರಿಬ್ಬರು ಮಾತ್ರವಲ್ಲದೆ ಇಬ್ಬರು ಸಾಕ್ಷಿಗಳು ಅಥವಾ ಆ ಕ್ಷೇತ್ರಮಠ (Parish)ದ ಪಾದ್ರಿಯು ಸಹಿ ಹಾಕುತ್ತಾರೆ. ಈ ಸಂದರ್ಭದಲ್ಲಿಯೇ ಮದುವೆಯ ದಿನವನ್ನೂ ಗೊತ್ತು ಮಾಡುವುದುಂಟು.

ನಿಶ್ಚಿತಾರ್ಥವಾದ ನಂತರ ವಧೂವರರು ತಂತಮ್ಮ ಸೋದರ ಮಾವಂದಿರೊಂದಿಗೆ ಹೊರಟು ವಧುವು ವಾಸ ಮಾಡುವ ಸ್ಥಳದ ಅಧಿಕಾರವನ್ನು ನಿರ್ವಹಿಸುವ ಮಠ (Parish)ದ ಪಾದ್ರಿಯ ಬಳಿ ಬಂದು ಈ ವಿಚಾರವನ್ನು ತಿಳಿಸುತ್ತಾರೆ. ಪಾದ್ರಿಯು ಈ ಸಂಬಂಧಕ್ಕೆ ಧಾರ್ಮಿಕವಾದ ಅಭ್ಯಂತರಗಳೇನಾದರೂ ಉಂಟೋ ಎಂದು ಪರಿಶೀಲಿಸಿ ಸಮರ್ಪಕವೆಂದು ತನಗೆ ತೋರಿದರೆ ವರನ ಕ್ಷೇತ್ರಮಠದ ಪಾದ್ರಿಗೆ ಸುದ್ದಿಯನ್ನು ಕಳುಹಿಸುತ್ತಾನೆ. ವರನ ಕ್ಷೇತ್ರಮಠವೂ ತನ್ನದೇ ಆದರೆ ಇದರ ಅಗತ್ಯವಿಲ್ಲವಷ್ಟೆ. ಇದಾದ ನಂತರ ವಧೂವರರಿಬ್ಬರ ಕ್ಷೇತ್ರಮಠಗಳಲ್ಲಿಯೂ ಭಾನುವಾರದ ಪ್ರಾರ್ಥನಾ ಸಭೆ ನಡೆಯುವಾಗ ಪಾದ್ರಿಗಳು ಈ ಸಂಬಂಧದ ವಿಚಾರ ತಿಳಿಸುತ್ತಾರೆ. ಇದಕ್ಕೆ ಬಾನ್ಸ್ (bann) ಎಂದು ಹೆಸರು. ಅನುಕ್ರಮವಾಗಿ ಮೂರು ಭಾನುವಾರಗಳು ಕ್ಯಾಥೋಲಿಕ್ಕರಲ್ಲಿ ಎರಡು ಭಾನುವಾರಗಳು ಪ್ರಾಟೆಸ್ಟೆಂಟರಲ್ಲಿ ಹೀಗೆ

ಬಹಿರಂಗವಾಗಿ ಪ್ರಕಟಣೆ ನಡೆಯುತ್ತದೆ. ಇದರ ಉದ್ದೇಶವೇ ನೆಂದರೆ ಈ ವಧೂವರರಿಬ್ಬರ ಸಂಬಂಧಕ್ಕೆ ಯಾವುದಾದರೂ ಅಡ್ಡಿ–ಆತಂಕಗಳಿದ್ದರೆ ಅವನ್ನು ಆಯಾ ಕ್ಷೇತ್ರದವರು ಹೊರಗೆಡು ಹಲು ಅನುಕೂಲ ಮಾಡಿಕೊಡುವುದು. ಕಡೆಯ ಬಾರಿ ಪ್ರಕಟಣೆ ನಡೆದ ಮೇಲೆ ಮೂರು ದಿನಗಳ ಕಳೆದಂದು ಯಾರಿಂದಲೂ ಯಾವ ವಿಧವಾದ ಆಕ್ಷೇಪಣೆಯೂ ಬರದಿದ್ದರೆ ಮದುವೆ ನಡೆ ಯುತ್ತದೆ.

**ಒಪ್ಪಿಗೆ**

ಮದುವೆಗೆಂದು ಗೊತ್ತಾದ ದಿನ ವಧೂವರರಿಬ್ಬರೂ ಅಲಂಕೃತ ರಾಗಿ ತಂತಮ್ಮ ನೆಂಟರಿಷ್ಟರೊಂದಿಗೆ ಚರ್ಚಿಗೆ ಬರುತ್ತಾರೆ. ಅಲ್ಲಿ ಪವಿತ್ರಾಂಕಣದ ವೇದಿ (Altar)ಯ ಮುಂದೆ ವಧೂ ವರರಿಬ್ಬರೂ ಮಂಡಿಯೂರಿ ನಿಲ್ಲುತ್ತಾರೆ. ಪಾದ್ರಿಯು ನೇಮಿ ಸಿದ ಇಬ್ಬರು ಸಾಕ್ಷಿಗಳು ಬಂದು ಅವರ ಎರಡೂ ಪಕ್ಕಗಳಲ್ಲಿ ನಿಲ್ಲುತ್ತಾರೆ. ಸಂದರ್ಭೋಚಿತವಾದ ಉಡುಪನ್ನು ಧರಿಸಿದ ಪಾದ್ರಿಯು ವೇದಿಕೆಯ ಕಟಕಟೆಯ ಆಕಡೆ ಬಂದು ನಿಲ್ಲುತ್ತಾನೆ. ಬಂದವನೆ ವಧೂವರರನ್ನು ಕುರಿತು ಪ್ರಶ್ನೆಗಳನ್ನು ಹಾಕುತ್ತಾನೆ. "ಅಯ್ಯಾ ನೀನು ಇವಳನ್ನು ನಮ್ಮ ತಾಯಿ ಚರ್ಚಿನ ಸಂಪ್ರ ದಾಯಗಳಂತೆ ವಿಧಿವಿಹಿತ ಹೆಂಡತಿಯನ್ನಾಗಿ ಸ್ವೀಕರಿಸುತ್ತೀಯಾ?" ಎಂದು ವರನನ್ನು ಕೇಳುತ್ತಾನೆ. ವರನು ಹೌದೆಂದ ಮೇಲೆ ವಧುವನ್ನು ಹಾಗೆಯೇ ಪ್ರಶ್ನೆ ಮಾಡುತ್ತಾನೆ. ಆಕೆಯೂ ಹೌದೆಂದನಂತರ ಇಬ್ಬರ ಬಲಗೈಗಳನ್ನು ಸೇರಿಸಿರೆಂದು ಹೇಳಿ, ಪವಿತ್ರ ಜಲದಿಂದ ಸಂಪ್ರೋಕ್ಷಣೆ ಮಾಡಿ, "ಪಿತಾ, ಪುತ್ರ, ಪವಿತ್ರಾತ್ಮ ಇವರ ಹೆಸರಿನಲ್ಲಿ ನಿಮ್ಮಿಬ್ಬರನ್ನೂ ವಿವಾಹದಲ್ಲಿ

ಸೇರಿಸುತ್ತೇನೆ. ಸ್ವಸ್ತಿ" ಎಂದು ಉದ್ಘೋಷಿಸುತ್ತಾನೆ. ಇದೇ ಮದುವೆಯ ಪ್ರಮುಖ ಘಟ್ಟ.

**ಸಂಕಲ್ಪ**

ಇದು ಕ್ಯಾಥೋಲಿಕ್ಕರ ಸರಳವಿಧಿ. ಪ್ರಾಟೆಸ್ಟೆಂಟರಲ್ಲಿ ಪಾದ್ರಿಯು ಮೊದಲು ಮದುವೆಯ ಧಾರ್ಮಿಕ ಸ್ವರೂಪವನ್ನು ಕುರಿತು ಧರ್ಮಗ್ರಂಥಗಳಿಂದ ಭಾಗಗಳನ್ನು ಓದುತ್ತಾನೆ. ಇಬ್ಬರು ಸಾಕ್ಷಿಗಳ ಮತ್ತು ರಿಜಿಸ್ಟ್ರಾರನ ಸಮ್ಮುಖದಲ್ಲಿ ವಧೂವರರಿಬ್ಬರೂ ಪರಸ್ಪರ ಮದುವೆಯಲ್ಲಿ ಕೂಡಲು ಯಾವ ಅಡ್ಡಿಯನ್ನೂ ಕಾಣರೆಂದು ಹೇಳುತ್ತಾರೆ. ಅವರ ಹೆಸರುಗಳನ್ನು ಕೂಗಿ ಹೇಳುತ್ತಾರೆ. ಅನಂತರ ಪಾದ್ರಿಯು "ಗಾರ್ಹಸ್ಥ್ಯ ಎಂಬ ಪವಿತ್ರಸ್ಥಿತಿಯಲ್ಲಿ ಭಗವಂತನ ಆದೇಶಗಳನ್ನು ನಡೆಸುತ್ತಾ ಈಕೆಯನ್ನು ಕೈ ಹಿಡಿದು ಧರ್ಮಪತ್ನಿಯನ್ನಾಗಿ ಗ್ರಹಿಸಿ ಅವಳನ್ನು ಪ್ರೀತಿಸಿ, ಉಪಚರಿಸಿ, ಗೌರವಿಸಿ, ಕಾಪಾಡಿ ಇಬ್ಬರ ಪ್ರಾಣವಿರುವವರೆಗೂ ಅವಳೊಬ್ಬಳನ್ನೇ ಕೂಡಿಕೊಳ್ಳುತ್ತಾ ಇರುವಿಯೋ?" ಎಂದು ವರನನ್ನೂ. ಅದೇ ರೀತಿ ವಧುವನ್ನೂ ಎಲ್ಲರ ಎದುರಿನಲ್ಲಿಯೂ ಪ್ರಶ್ನೆ ಮಾಡುತ್ತಾನೆ. ಅವರು ಹೌದೆಂದ ಮೇಲೆ ವರನು ತನ್ನ ಬಲಗೈಯಿಂದ ವಧುವಿನ ಬಲಗೈಯನ್ನು ಹಿಡಿದು "ನೆರೆದಿರುವವರ ಎದುರಿನಲ್ಲಿ ನಾನು (ತನ್ನ ಹೆಸರನ್ನು ಹೇಳಿಕೊಂಡು) ನಿನ್ನನ್ನು (ವಧುವಿನ ಹೆಸರನ್ನು ಹೇಳಿ) ಗ್ರಹಿಸುತ್ತೇನೆ. ಇಂದಿನಿಂದ ಸಾವು ನಮ್ಮನ್ನು ಅಗಲಿಸುವವರೆಗೂ, ಭಗವಂತನ ಆದೇಶದಂತೆ, ನಿನ್ನನ್ನೇ ಪ್ರೀತಿಸಿ, ಪುರಸ್ಕರಿಸುತ್ತೇನೆ" ಎಂದು ಸಂಕಲ್ಪಮಾಡುತ್ತಾನೆ. ಇಬ್ಬರೂ ಕೈಗಳನ್ನು ಬಿಟ್ಟುಬಿಡುತ್ತಾರೆ.

ಅನಂತರ ವಧುವು ತನ್ನ ಬಲಗೈಯಿಂದ ವರನ ಬಲಗೈಯನ್ನು ಹಿಡಿದು ಅದೇ ರೀತಿ ಸಂಕಲ್ಪ ಮಾಡುತ್ತಾಳೆ. ಮತ್ತೆ ಕೈ

ಬಿಟ್ಟ ನಂತರ, ವರನು ಉಂಗುರವೊಂದನ್ನು ಪವಿತ್ರ ಪುಸ್ತಕದ ಮೇಲೆ ಇಡುತ್ತಾನೆ. ಪಾದ್ರಿಯು ಅದನ್ನು ಕೈಗೆತ್ತಿಕೊಂಡು ಮತ್ತೆ ವರನ ಕೈಗೆ ಕೊಡುತ್ತಾನೆ. ವರನು ವಧುವಿನ ಎಡಗೈಯ ನಾಲ್ಕನೇ ಬೆರಳಿಗೆ ಉಂಗುರವನ್ನು ಹಾಕಿ "ಇದು ನನ್ನ ಸಂಕಲ್ಪದ ಪ್ರತೀಕ; ಪಿತಾ, ಪುತ್ರ, ಪವಿತ್ರಾತ್ಮರ ಹೆಸರಿನಲ್ಲಿ ನಿನ್ನನ್ನು ಮದುವೆಯಾಗುತ್ತಿದ್ದೇನೆ" ಎಂದು ಹೇಳುತ್ತಾನೆ. ಆಗ ಇಬ್ಬರೂ ಮೊಣಕಾಲೂರಿ ನಿಲ್ಲುತ್ತಾರೆ. ಪಾದ್ರಿಯೂ ಸೇರಿ ಎಲ್ಲರೂ ಪ್ರಾರ್ಥನೆ ಸಲ್ಲಿಸುತ್ತಾರೆ. ಆನಂತರ ಪಾದ್ರಿಯು ವಧೂವರರ ಬಲಗೈಗಳನ್ನು ಸೇರಿಸಿ "ಭಗವಂತನು ಸೇರಿಸಿದುದನ್ನು ಯಾವ ಮನುಷ್ಯನೂ ಒಡೆಯದಿರಲಿ" ಎಂದು ಹೇಳುತ್ತಾನೆ. ಸ್ವಸ್ತಿವಾಚನದಿಂದ ಸಮಾರಂಭ ಮುಗಿಯುತ್ತದೆ.

## ಮಾಂಗಲ್ಯ ಧಾರಣೆ

ದಕ್ಷಿಣ ಭಾರತದ ಹಲವಾರು ಕ್ರೈಸ್ತ ಪಂಗಡಗಳಲ್ಲಿ ತಾಳಿ ಕಟ್ಟುವ ಪದ್ಧತಿ ಉಂಟು. ಪ್ರಶ್ನೋತ್ತರಗಳು ಮುಗಿದ ಮೇಲೆ, ಒಂದು ತಟ್ಟೆಯಲ್ಲಿಟ್ಟು ಹೂಮಾಲೆಗಳಿಂದ ಮುಚ್ಚಿದ ತಾಳಿಯನ್ನು ಪಾದ್ರಿಯು "ಭಗವಂತನನೇ, ನಿನ್ನ ಹೆಸರಿನಿಂದ ಈ ತಾಳಿಯನ್ನು ಹರಸುತ್ತೇನೆ. ಇದನ್ನು ಧರಿಸುವ ಈ ಹೆಂಗಸು ಎಂದೂ ಪತಿವ್ರತೆಯಾಗಿರಲಿ; ನಿನ್ನ ಶಾಂತಿ, ಸಂಕಲ್ಪಗಳಲ್ಲಿ ನಡೆಯಲಿ. ನಮ್ಮ ಸ್ವಾಮಿ ಏಸುಕ್ರಿಸ್ತರ ದ್ವಾರಾ ನಿನ್ನ ಪ್ರೀತಿಯನ್ನು ಪಡೆಯಲಿ. ಸ್ವಸ್ತಿ" ಎಂದು ಹರಸುತ್ತಾನೆ. ತಾಳಿಯ ಮೇಲೆ ಪವಿತ್ರ ಜಲದಿಂದ ಸಂಪ್ರೋಕ್ಷಣೆಮಾಡಿ ವರನ ಕೈಗಿತ್ತು ವಧುವಿನ ಕತ್ತಿಗೆ ಕಟ್ಟುವಂತೆ ನಿರ್ದೇಶಿಸುತ್ತಾನೆ. ಪಾದ್ರಿಯು "ಪಿತಾ, ಪುತ್ರ, ಪವಿತ್ರಾತ್ಮರ ಹೆಸರಿನಲ್ಲಿ, ಸ್ವಸ್ತಿ" ಎಂದು ಪಠಿಸುತ್ತಿದ್ದಾಗ ವರನು ತಾಳೀ ಬಂಧನ

ವಿಧಿಯನ್ನು ಮುಗಿಸುತ್ತಾನೆ. ತಾಳಿಯ ಮೇಲೆ ಶಿಲುಬೆಯ ಚಿಹ್ನೆ ಇರುತ್ತದೆ.

ಸ್ವಸ್ತಿವಾಚನ ನಡೆದ ನಂತರ ಕಡೆಯದಾಗಿ ಚರ್ಚಿನ ವಿವಾಹ ರಿಜಿಸ್ಟರ್‌ನಲ್ಲಿ ವಧೂವರರಿಬ್ಬರೂ ರುಜು ಮಾಡುತ್ತಾರೆ. ಇದನ್ನು ದೃಢೀಕರಿಸಿ ಇಬ್ಬರು ಸಾಕ್ಷಿಗಳೂ, ಪೌರೋಹಿತ್ಯ ನಡೆಸಿದ ಪಾದ್ರಿಯೂ ರುಜು ಮಾಡುತ್ತಾರೆ. ಇದು ಮುಗಿದು ಮನೆಗೆ ಬಂದ ಮೇಲೆ ಸಂಭ್ರಮದ ಸಮಾರಂಭ ಶುರುವಾಗುತ್ತದೆ. ಇದು ಕೇವಲ ಲೌಕಿಕ ಸಮಾರಂಭ. ತಮತಮಗೆ ಇಷ್ಟಬಂದ ಪದ್ಧತಿಗಳನ್ನೆಲ್ಲಾ ಈಗ ಮಾಡಲು ಅಡ್ಡಿ ಇಲ್ಲ. ಕ್ಯಾಥೋಲಿಕ್ಕರು ಇದನ್ನು 'ಲೋಕಕಲ್ಯಾಣ' ಎಂದು ಕರೆಯುತ್ತಾರೆ. ಹಿಂದುಗಳ ಪದ್ಧತಿಗಳನ್ನೆಲ್ಲಾ ಒಂದಲ್ಲ ಒಂದು ರೂಪದಲ್ಲಿ ಇಲ್ಲಿ ಕಾಣಬಹುದು.

**ವೈವಾಹಿಕ ಪೂಜೆ**

ವಧೂವರರ ಕಡೆಯವರು ಇಷ್ಟಪಟ್ಟರೆ ಮದುವೆ ಮುಗಿದ ನಂತರ ಅದೇ ಚರ್ಚಿನಲ್ಲಿಯೇ ವೈವಾಹಿಕ ಪೂಜೆ (nuptial mass) ಎನ್ನುವ ವಿಧಿ ನಡೆಯುತ್ತದೆ. ಇದರಲ್ಲಿಯೂ ಇತರ 'ಮಾಸ್'ಗಳಲ್ಲಿದ್ದಂತೆಯೇ ನೈವೇದ್ಯ ಸಮರ್ಪಣ (consecration) ಮತ್ತು ಸತ್ಪ್ರಸಾದ(communion) ಎಂಬ ಎರಡು ಅಂಗಗಳುಂಟು. ಆದರೆ ಈ ವೈವಾಹಿಕ ಪೂಜೆಯು ನವದಂಪತಿಗಳಿಗೆ ಸಕಲ ಕ್ಷೇಮಾಭ್ಯುದಯಗಳನ್ನು ಕೋರಿ ಭಗವಂತನಿಗೆ ಪ್ರಾರ್ಥನೆ ಸಲ್ಲಿಸುತ್ತಾರೆ. ವಿವಾಹ ಮಂಗಳದ ವಿಚಾರವಾಗಿ ಬೈಬಲ್ಲಿನಲ್ಲಿ ಬರುವ ಉಪದೇಶಗಳನ್ನು ಇಲ್ಲಿ ಪಠಿಸುತ್ತಾರೆ. ಪಾದ್ರಿಯು ವಧೂವರರನ್ನು ಉದ್ದೇಶಿಸಿಯೇ ಈ ಶಾಂತಿಮಂತ್ರಗಳನ್ನೆಲ್ಲ ಹೇಳುತ್ತಾನೆ. "ಅಬ್ರಹಾಮನ, ಐಸಾಕನ, ಯಾಕೋಬನ ದೇವರು ನಿಮ್ಮಿಬ್ಬರಲ್ಲಿ ಇರಲಿ. ತನ್ನ ಸಂಕಲ್ಪವನ್ನು ದೇವರು ನಿಮ್ಮಲ್ಲಿ ಪೂರೈಸಿಕೊಳ್ಳಲಿ,

ಏಸುಕ್ರಿಸ್ತರ ನೆರವಿನಿಂದ ನೀವಿಬ್ಬರೂ ಮಕ್ಕಳು-ಮೊಮ್ಮ ಕ್ಕಳನ್ನು ಮೂರು-ನಾಲ್ಕು ತಲೆಮಾರುಗಳ ಮಕ್ಕಳನ್ನು ಕಾಣುವಂತಾಗಿ ಅನಂತರ ಶಾಶ್ವತವಾದ ಪದವಿಯನ್ನು ಪಡ ಯುವಿರಿ" ಎನ್ನುವುದು ಮುಖ್ಯಮಂತ್ರ. ಇದೇ ಆಶೀರ್ವಚನ (nuptial blessing). ವಧೂವರರಲ್ಲಿ ಒಬ್ಬರು ಕ್ಯಾಥೋಲಿಕ ಪಂಥದವರಲ್ಲವಾದರೆ ಈ ವೈವಾಹಿಕ ಪೂಜೆಯ ವಿಧಿ ನಡೆಯುವ ದಿಲ್ಲ. ಇದು ಸಂಪೂರ್ಣವಾಗಿ ಕ್ಯಾಥೋಲಿಕ್ ಸಂಪ್ರದಾಯವೇ

**ಕ್ರೈಸ್ತ 'ಕಲ್ಪನೆ'**

ಹಿಂದೂ ಧರ್ಮಶಾಸ್ತ್ರಗಳಂತೆಯೇ ಕ್ರೈಸ್ತ ಕಲ್ಪನೆಯೂ ವಿವಾ ಹವು ಧರ್ಮ ಜೀವನಕ್ಕೆ ನಾಂದಿಯೆಂದೂ, ಪುರುಷಾರ್ಥಗಳನ್ನೆ ಇಲ್ಲಿ ಪಡೆಯುವುದು ಸಾಧ್ಯವೆಂದೂ ಹೇಳುತ್ತದೆ. ದಂಪತಿಗ ನಡುವೆ ಅವಶ್ಯವಾಗಿ ಇರಬೇಕಾದ ಅನುರಾಗ, ಸಹನೆ, ಕ್ಷಮೆ ಸಹಾಯ, ಮನೋಧರ್ಮ ಇವುಗಳನ್ನು ಅವರ ವಿವಾಹ ವಿಧಿಗಳ ಪಠಿಸುವ ಮಂತ್ರಗಳು ಒತ್ತಿ ಹೇಳುತ್ತವೆ. ಸ್ತ್ರೀಪುರುಷರ ಅನುಕೂ ದಾಂಪತ್ಯಕ್ಕೆಂದು ಭಗವಂತನೇ ಮೂಡಿಸಿದ ಪದ್ಧತಿ ವಿವಾ ವೆಂದು ಅವರ ವಿಶ್ವಾಸ. ವಿವಾಹದ ಮುಖ್ಯ ಉದ್ದೇಶ ಮಕ್ಕ ರಕ್ಷಣೆ, ಪೋಷಣೆ, ಶಿಕ್ಷಣ ಎಂದು ಸಂತ ಪೌಲನ ಅಭಿಪ್ರಾಯ ಮಕ್ಕಳ ಹಿತವನ್ನು ಮರೆಯುವವರು ಪಾಷಂಡಿಗಳು, ಧರ್ಮ ಬಾಹಿರರು ಎಂದು ಅವನು ಮೂದಲಿಸಿದ್ದಾನೆ. ಅಂತ ಗಾರ್ಹಸ್ಥ್ಯ ಜೀವನವೊಂದು ಸಂಸ್ಕಾರ, ಮೋಕ್ಷಸಾಧನ, ಸಾಂಘಿ ವ್ಯವಸ್ಥೆ, ಶಿಕ್ಷಣಕೇಂದ್ರ ಎಂದು ಕ್ರೈಸ್ತರೂ ನಂಬುತ್ತಾರೆ.

# ಪ್ರಚಾರೋಪನ್ಯಾಸ ಮಾಲೆ

| | | |
|---|---|---|
| 1. | ನಗೆಯ ನೆಲೆ | ಎಸ್. ಕೆ. ರಾಮಚಂದ್ರರಾವ್ |
| 2. | ನಕ್ಷತ್ರ ಲೋಕ | ಜಿ. ಟಿ. ನಾರಾಯಣರಾವ್ |
| 3. | ಭಯ – ಸರಳ ವಿಶ್ಲೇಷಣೆ | ಎಂ. ಶಿವರಾಂ |
| 4. | ಶ್ರೀ ಕವಿ ಲಕ್ಷ್ಮೀಶ | ಜಿ. ಎಸ್. ಸಿದ್ಧಲಿಂಗಯ್ಯ |
| 5. | ಶಾಂತಿನಾಥ ಕವಿ | ಕಮಲಾ ಹಂಪನಾ |
| 6. | ಉತ್ತಂಗಿ ಚನ್ನಪ್ಪ | ಸ. ಸ. ಮಾಳವಾಡ |
| 7. | ಬಯಲಾಟಗಳು | ಚಂದ್ರಶೇಖರ ಕಂಬಾರ |
| 8. | ನಾಟಕದಲ್ಲಿ ನವ್ಯತೆ | ಪಿ. ಲಂಕೇಶ್ |
| 9. | ದ್ರಾವಿಡ ಸಂಖ್ಯಾವಾಚಕಗಳು | ಹಂಪ. ನಾಗರಾಜಯ್ಯ |
| 10. | ಉಪಭಾಷೆ | ಕೃಷ್ಣ ಪರಮೇಶ್ವರ ಭಟ್ಟ |
| 11. | ಅರವಿಂದರ ವಿಚಾರಧಾರೆ | ಸಿ. ಕೆ. ವೆಂಕಟರಾಮಯ್ಯ |
| 12 | ಪೂರ್ಣಯೋಗಿ ಶ್ರೀ ಅರವಿಂದರು | ಕೋ. ಚೆನ್ನಬಸಪ್ಪ |
| 13. | ಪ್ರಾಚೀನ ಸಂಸ್ಕೃತಿ | ಎಸ್. ಕೆ. ರಾಮಚಂದ್ರರಾವ್ |
| 14. | ಪ್ರಾಚೀನ ಭಾರತದ ಆರ್ಥಿಕ ವ್ಯವಸ್ಥೆ | ಎನ್. ಜಿ. ಚಂದ್ರಶೇಖರಯ್ಯ |
| 15. | ಸಣ್ಣ ಕೈಗಾರಿಕೆಗಳು | ಆರ್. ಎಸ್. ಆರಾಧ್ಯ |
| 16. | ವಿವಾಹ ಪದ್ಧತಿಗಳು | ಎಸ್. ಕೆ. ರಾಮಚಂದ್ರರಾವ್ |
| 17. | ಪಾನೀಯಗಳು | ಕೆ. ಎಸ್. ಲಕ್ಷ್ಮಣರಾವ್ |
| 18. | ಚಂದ್ರಲೋಕ ಯಾತ್ರೆ | ಪಿ. ಎಸ್. ವೆಂಕಟಸ್ವಾಮಿ ಶೆಟ್ಟಿ |
| 19. | ಬೆಳಕಿನ ಸ್ವರೂಪ | ಬಿ. ವಿ. ನಾರಾಯಣರಾವ್ |
| 20. | ದೂರದರ್ಶನ | ಕೆ. ಶೇಷಾದ್ರಿ ಅಯ್ಯಂಗಾರ್ |
| 21. | ಸೂಕ್ಷ್ಮದರ್ಶಕಗಳು ಮತ್ತು ದೂರದರ್ಶಕಗಳು | ಕೆ. ಶೇಷಾದ್ರಿ ಅಯ್ಯಂಗಾರ್ |
| 22. | ಕುರುಡು | ಎಸ್. ಟಿ. ಪುಟ್ಟಣ್ಣ |
| 23. | ಕಣ್ಣಿನ ರೋಗಗಳು | ಎಸ್. ಟಿ. ಪುಟ್ಟಣ್ಣ |
| 24. | ಕ್ಷಯ | ಎಂ. ಬಸವರಾಜೆ ಅರಸು |
| 25. | ಮೂತ್ರಪಿಂಡದ ಕೆಲವು ರೋಗಗಳು | ಎಂ. ಬಸವರಾಜೆ ಅರಸು |
| 26. | ಉಕ್ಕು : ತಯಾರಿಕೆ ಮತ್ತು ರಚನೆ | ಕೆ. ಆರ್. ಮೋಹನ್ |
| 27. | ನೀರಾವರಿ ಸಮಸ್ಯೆಗಳು | ಕೆ. ಎನ್. ಶಿವಶಂಕರರಾವ್ |
| 28. | ಅಂತರ್ಜಲ | ಸಿ. ನಾಗಣ್ಣ |